ಭಾವಹಿಸಿದ್ದೆ. ಡಾ. ಎಚ್. ಕೆ. ರಂಗನಾಥ ಆಗ ಬಹಳ ಕಾಲ ನಾಟಕ ವಿಭಾಗದ ಕಾರ್ಯನಿರ್ವಾಹಕರಾಗಿ ನಮಗೆಲ್ಲ ಮೆಚ್ಚಿನವರಾಗಿದ್ದರು. ಭಾಗೋಜಿಯವರ ಅಂದಿನ ಪರಿಚಯ ಬರಬರುತ್ತ ಸ್ನೇಹವಾಗಿ ಪರಿಣಮಿಸಲು ಬಹಳ ದಿನ ಹಿಡಿಯಲಿಲ್ಲ. ಯಾಕೆಂದರೆ ನಮ್ಮಿಬ್ಬರ ಹವ್ಯಾಸಗಳು ಹಾಗೂ ಮನೋಧರ್ಮ ಒಂದೇ ಬಗೆಯಾಗಿದ್ದವು. ವೇಷಭೂಷಣದಲ್ಲಿ ಮಾತ್ರ ನಮ್ಮ ನಮ್ಮ ಅಭಿರುಚಿಗೆ ನಾವು ಹೊಂದಿಕೊಂಡಿದ್ದೇವೆ.

ಅನೇಕ ಸಭೆ, ಸಮಾರಂಭಗಳಲ್ಲಿ ವಿಚಾರ ಸಂಕಿರಣ ಗೋಷ್ಠಿ - ಇತ್ಯಾದಿಗಳಲ್ಲಿ ನಾವಿಬ್ಬರೂ ಆಕಸ್ಮಿಕವಾಗಿ ಕೂಡಿಯೇ ಭಾಗವಹಿಸಿದ್ದುಂಟು. ನಮ್ಮ ವಿಶ್ವವಿದ್ಯಾಲಯದ ಪ್ರಸಾರಾಂಗದ ಅನೇಕ ಉಪನ್ಯಾಸ ಶಿಬಿರಗಳಿಗೆ ಅವರನ್ನು ಆಮಂತ್ರಿಸಿದಾಗ ಅವರೆಂದೂ ನಿರಾಕರಿಸಿದ್ದಿಲ್ಲ. ಅಂಥ ಪ್ರಸಂಗಗಳನ್ನು ನಾವು ಕಾವ್ಯ-ಶಾಸ್ತ್ರ-ವಿನೋದಕ್ಕಾಗಿ ಬಳಸಿಕೊಂಡದ್ದುಂಟು. ಉತ್ತಮ ಅಧ್ಯಾಪಕರಾಗಿದ್ದ ಅವರು ತಮಗೆ ಕೊಟ್ಟ ವಿಷಯವನ್ನು ಆಳವಾಗಿ ಅಭ್ಯಾಸಮಾಡಿಕೊಂಡು ಕೇಳುಗರಿಗೆ ಮನದಟ್ಟಾಗುವಂತೆ, ಸರಳವಾಗಿ, ಗಾಂಭೀರ್ಯಕ್ಕೆ ಚ್ಯುತಿ ಬರದಂತೆ ಪ್ರತಿಪಾದಿಸುವ ಕಲೆ ಅವರು ವಾಕ್ಪಟುತ್ವಕ್ಕೆ ಮೆರುಗು ನೀಡುವುದುಂಟು. ಹದಗೆಡದಂತೆ ಹಾಸ್ಯವನ್ನು ಅವರು ಹಿತಮಿತವಾಗಿ ಬಳಸಬಲ್ಲರು. ಹಳಗನ್ನಡ, ಹೊಸಗನ್ನಡ - ಯಾವ ಸಾಹಿತ್ಯವನ್ನಾದರೂ ಸಹೃದಯ ವಿಮರ್ಶೆಯಿಂದ ನೋಡುವ ಅಪೇಕ್ಷೆಯನ್ನು ಅವರು ಬಿಟ್ಟುಕೊಟ್ಟವರಲ್ಲ. ಓದು, ಬರವಣಿಗೆಯ ವೈರಿ ಎಂಬ ಮಾತೊಂದುಂಟು. ಹಾಗೆಯೇ ಭಾಷಣಕ್ಕೂ ಅದನ್ನು ಅನ್ವಯಿಸಬಹುದು. ನಾವು ಹೇಳಬೇಕೆಂದ ವಿಚಾರಗಳಿಗೆ ಭಾಷಣದಲ್ಲಿ ಒಂದುಕಡೆ ಅಭಿವ್ಯಕ್ತಿ ದೊರೆತೊಡನೆಯೇ ಅದನ್ನು ಬರವಣಿಗೆಗೆ ಇಳಿಸುವ ಉತ್ಸಾಹ ಅನೇಕ ಸಲ ಉಳಿಯುವುದಿಲ್ಲ. ವಾಗ್ಮಿಗಳೆನಿಸಿದ ಭಾಗೋಜಿಯವರಿಗೂ ಇದರ ಅನುಭವವಾಗಿರಬಹುದು. ಅದಕ್ಕಾಗಿಯೇ ಇರಬಹುದು ಅವರು ಬರೆದದ್ದು ಬಹಳ ಕಡಿಮೆ. ಆದರೆ ಹಾಗೆ ಬರೆದಷ್ಟೂ ಬೆಲೆಯುಳ್ಳದ್ದೇ. 'ರಸಗವಳ' ಪುಸ್ತಕದ ಪ್ರಬಂಧಗಳಲ್ಲಿ ನಾವಿದನ್ನು ಕಾಣಬಹುದು. 'ನಮ್ಮ ಬೆಳಗಾವಿ' ಯಂತೂ ಅವರ ಮಹತ್ವದ ಕೊಡುಗೆಯಾಗಿ ಉಳಿಯಬಲ್ಲುದು. ಅನೇಕ ಕ್ಷೇತ್ರಗಳಲ್ಲಿ, ಅನೇಕ ರೂಪಗಳಲ್ಲಿ ಬೆಳಗಾವಿ ಬೆಳೆದು ಬಂದ ಬಗೆಯನ್ನು, ಅದರ ಎಲ್ಲ ಘರ್ಷಣೆ, ಸುಖ-ಸಂತೋಷ, ಸರಸ-ವಿರಸಗಳೊಂದಿಗೆ ಭಾಗೋಜಿ ಅದನ್ನು ತಮ್ಮ ಪಾಲಿನ ಭಾಗ್ಯನಗರವನ್ನಾಗಿ ಕಟೆದು ನಿಲ್ಲಿಸಿದ್ದಾರೆ.

ಆರ್.ಪಿ.ಡಿ. ಕಾಲೇಜಿನಲ್ಲಿ ಕಾಲು ಶತಮಾನ ಕಾಲ ಕನ್ನಡ ಅಧ್ಯಾಪಕರಾಗಿ ನಗರದ ಭಾಷಾವೈಷಮ್ಯದ ಗಳಿಗೆಗಳಲ್ಲಿಯೂ ಮನಸ್ಸಿನ ಸಮತೂಕವನ್ನು ಕಳೆದುಕೊಳ್ಳದೆ, ಕೊನೆಗೆ ಪ್ರಾಚಾರ್ಯರಾಗಿ ನಿವೃತ್ತಿ ಪಡೆದದ್ದು ಆ ಸಂಸ್ಥೆಯ ಆಡಳಿತ ವರ್ಗ ಅವರ ಬಗ್ಗೆ ತಳೆದ ಗೌರವ ಭಾವನೆಯ ದ್ಯೋತಕವಾಗಿದೆ. ಕನ್ನಡ ಕಾವಲು ಸಮಿತಿಯ ಸದಸ್ಯರಾಗಿಯೂ ತಮ್ಮ ಅರ್ಹತೆಯನ್ನು ಅವರು ಸಾಬೀತುಗೊಳಿಸಿದ್ದಾರೆ. ಸಜ್ಜನಿಕೆಯ ಮೂರ್ತಿಯಾಗಿದ್ದರೂ ವಿಷಯಾನುಸಾರ ನಿಷ್ಠುರವಾಗಿ ಅವರು ವರ್ತಿಸಬಲ್ಲರು. ಕರ್ನಾಟಕ ವಿಶ್ವವಿದ್ಯಾಲಯದ

ಸೆನೆಟ್ ಸದಸ್ಯರಾಗಿದ್ದಾಗ, ಕನ್ನಡ ಪಠ್ಯಕ್ರಮ ಹಾಗೂ ಪಠ್ಯಪುಸ್ತಕಗಳಿಗೆ ಸಂಬಂಧಪಟ್ಟಂತೆ ಗುಣಮಟ್ಟದ ವಿಚಾರದಲ್ಲಿ ಅವರು ನಿಷ್ಠುರರಾಗಿ ನಡೆದುಕೊಂಡಿದ್ದನ್ನು ನಾನು ಬಲ್ಲೆ. ದೊಡ್ಡವರನ್ನು ಎದುರುಹಾಕಿಕೊಳ್ಳಬೇಕಾಗಿ ಬಂದ ಸಂದರ್ಭಗಳಲ್ಲಿಯೂ ಅವರು ತಮ್ಮ ನಿಲುವಿಗೆ ಅಂಟಿಕೊಂಡದ್ದುಂಟು.

ಭಾಗೋಜಿಯವರಂಥ ಅನುಭವಸ್ಥರು ಯಾವುದೇ ಸಂಘ ಸಂಸ್ಥೆಗಳಿಗೂ ಭೂಷಣ ಪ್ರಾಯರಾಗಬಲ್ಲರೆಂಬುದನ್ನು ಬೆಳಗಾವಿಯ ಕನ್ನಡಿಗರು ಬಲ್ಲರು. ಎಸ್.ಡಿ. ಇಂಚಲ ಸ್ಮಾರಕ ಸಂಸ್ಥೆಯ ಸಂಸ್ಥಾಪಕ ಸದಸ್ಯರಾಗಿ, ಸಮಿತಿಯ ಅಧ್ಯಕ್ಷರಾಗಿ ಒಂದು ದಶಕದ ವರೆಗೂ ಉಪಯುಕ್ತ ಸೇವೆಸಲ್ಲಿಸಿದರು. ಇವಕ್ಕೆಲ್ಲ ಕಿರೀಟಪ್ರಾಯವಾಗಿ ಸಾಹಿತ್ಯಾಸಕ್ತ ಸ್ನೇಹಿತರ ನೆರವಿನೊಂದಿಗೆ ಸ್ಥಾಪಿಸಿದ ಬೆಳಗಾವಿ ಜಿಲ್ಲಾ ಸಾಹಿತ್ಯ ಪ್ರತಿಷ್ಠಾನ, ಜಿಲ್ಲೆಯ ಲೇಖಕರ ಉತ್ತಮ ಗ್ರಂಥಗಳಿಗೆ ಬಹುಮಾನ ನೀಡುವ ಯೋಜನೆಯನ್ನು ಯಶಸ್ವಿಯಾಗಿ ನಡೆಸುತ್ತ ಬಂದಿರುವುದು ಅತ್ಯಂತ ಸ್ವಾಗತಾರ್ಹ. ‘ಸಿರಿಗನ್ನಡ ಪ್ರಶಸ್ತಿ’ ಇತ್ಯಾದಿ ಇನ್ನೂ ಕೆಲವು ಯೋಜನೆಗಳೊಂದಿಗೆ ಅದರ ಕಾರ್ಯವ್ಯಾಪ್ತಿ ವಿಸ್ತಾರಗೊಳ್ಳುತ್ತಿರುವುದು ನಿಜಕ್ಕೂ ಸಂತೋಷದಾಯಕವಾಗಿದೆ.

‘ಬೆಳಗಾವಿಯ ಭಾಗ್ಯ’ವೆನಿಸಿದ್ದ ಸನ್ಮಿತ್ರ ಭಾಗೋಜಿಯವರಿಗೆ ಭಗವಂತನು ಆಯುರಾರೋಗ್ಯ ಭಾಗ್ಯವನ್ನು ಕರುಣಿಸಲಿ, ಇಂದಿನ ಯುವಪೀಳಿಗೆ ಅವರ ಸೂಕ್ತ ಮಾರ್ಗದರ್ಶನದಲ್ಲಿ ಮುಂದುವರಿಯಲಿ ಎಂದು ಹೃದಯತುಂಬಿ ಹಾರೈಸುತ್ತೇನೆ.

‘ಅಣ್ಣಯ್ಯ’ ೧೯೯೯

೩೦

## ದಣಿವರಿಯದ ಅಕ್ಷರ ಸಂಗಾತಿ

..............................

'ಹೀಗುಂಟಯ್ಯ ನನ್ನ ಅಂಬಾರ ಕೊಡಲು
ನೂರು ಕತೆಗಳ ಒಡಲು
ನೂರು ವ್ಯಥೆಗಳ ಕಡಲು'

'ಅಂಬಾರಕೊಡಲು'; ಬಾಯ್ತುಂಬ ಬರುವ ಹೆಸರು; ಕಣ್ತುಂಬಿ ನಿಲ್ಲುವ ಪ್ರಕೃತಿ; ಮನಸ್ಸು ಮುದಗೊಳಿಸುವ ಸಂಸ್ಕೃತಿ. ಹೊರಗೆ ಹತ್ತುಸಲ ಕಂಡಿರಬಹುದು, ಗೋಷ್ಠಿಗಳಲ್ಲಿ ಸಹಭಾಗಿಯಾಗಿರಬಹುದು. ಆದರೆ ವಿಷ್ಣುನಾಯ್ಕ ಅವರನ್ನು ಆ ಪರಿಸರದ 'ಪರಿಮಳ'ದಲ್ಲಿ ನೋಡಿದಾಗಲೇ, ಅದರ ಅಂಗಳದಲ್ಲಿ ಅವರೇ ನಿರ್ಮಿಸಿಕೊಂಡ 'ಸದಾನಂದ ವೇದಿಕೆ'ಯ ಕಾರ್ಯಕ್ರಮಗಳನ್ನು ಪ್ರತ್ಯಕ್ಷ ಕಂಡಾಗಲೇ ಅವರ ಚೇತೋಹಾರಿ ವ್ಯಕ್ತಿತ್ವದ ವಿವಿಧ ಮುಖಗಳು ನಮಗೆ ಗೋಚರಿಸುತ್ತವೆ. ಯಾಕೆಂದರೆ ಆ ಗ್ರಾಮ ಆ ಜಿಲ್ಲೆಯ ಜೀವನಾಡಿಯಾಗಿ ಹಲವು ಹೋರಾಟಗಳ ಕತೆಗಳಿಗೆ ಕಿವಿಗೊಟ್ಟಿದೆ. ತಾನೇ ಕತೆಯಾಗಿದೆ. ಪಡುಗಡಲಿನ ತೆರೆಗಳ ಮೊರೆತದಂತೆ ಅಲ್ಲಿಯ ಸಾಮಾನ್ಯ ಜನಜೀವನದ ನೂರು ವ್ಯಥೆಗಳನ್ನು ದೂರದಿಂದ, ಸನಿಹದಿಂದ ಕಂಡು ಕರುಳು ಮಿಡಿದಿದೆ. ಆದ್ದರಿಂದಲೇ 'ಹೀಗುಂಟಯ್ಯಾ' ಎಂದು ಹೇಳುವಾಗ ಕವಿ ವಿಷ್ಣುನಾಯ್ಕ ನಮಗೆ ಆಪ್ತರಾಗುತ್ತಾರೆ.

ಹುಟ್ಟಿದೂರನ್ನೇ ತನ್ನೆಲ್ಲ ಚಟುವಟಿಕೆಗಳ ಮಧ್ಯಬಿಂದುವನ್ನಾಗಿ ಮಾಡಿಕೊಂಡು ಎಷ್ಟು ದೂರ ಬೇಕೊ ಅಷ್ಟು ದೂರ ಅದರ ವರ್ತುಳವನ್ನು ಹಿಗ್ಗಿಸಬಲ್ಲ ಶಕ್ತಿ ಸಾಮರ್ಥ್ಯ ಈ ವ್ಯಕ್ತಿಗೆ ಎಲ್ಲಿಂದ ಬಂತು ಎಂದು ಅಚ್ಚರಿಯುಂಟಾಗುತ್ತದೆ. (ಹಿಂದಿನ ಹಲಸಂಗಿ, ಚಡಚಣ, ಇಂದಿನ ಕಾಂತಾವರ ಈ ಸಂದರ್ಭದಲ್ಲಿ ನೆನಪಾಗಬಹುದು) ಈ ವರ್ತುಳದ ಪರಿಧಿಯಲ್ಲಿ ಅಂಕೋಲಾ ಕರ್ನಾಟಕ ಸಂಘ, ದಿನಕರ ದೇಸಾಯಿ ಸ್ಮಾರಕ ಪ್ರತಿಷ್ಠಾನ, ಮಾಧ್ಯಮಿಕ ಶಾಲಾ ನೌಕರರ ಸಂಘ, ಉ. ಕ. ಜಿಲ್ಲಾ ಕನ್ನಡ ಜಾಗೃತ ಸಮಿತಿ, ಸಾರ್ವಜನಿಕ ಗ್ರಂಥಾಲಯ ಪ್ರಾಧಿಕಾರ, ಖಾಸಗಿ ಶಿಕ್ಷಣ ಸಂಸ್ಥೆಗಳ ಹೋರಾಟ ಸಮನ್ವಯ ಸಮಿತಿ, ದುರ್ವ್ಯಸನ ವಿರೋಧಿ ಜಿಲ್ಲಾ ಸಮಿತಿ, ರಂಗ ನಾಟಕ, ಬೀದಿ ನಾಟಕ - ಹೀಗೆ ಎಳೆದಷ್ಟೂ ಅನೇಕ ತ್ರಿಜ್ಯಗಳನ್ನು ಕಾಣಬಹುದು. ಇವೆಲ್ಲ ವಿಷ್ಣುನಾಯ್ಕ ಅವರ ಸಮಷ್ಟಿ ಜೀವನದ ಬಗೆಗಿನ ಕಾಳಜಿಗಳ ದ್ಯೋತಕ.

ಹಾಗೆ ಅಚ್ಚರಿ ಪಡುವ ಸಂದರ್ಭದಲ್ಲಿ ಸ್ವಲ್ಪ ಹಿಂದಿರುಗಿ ನೋಡಿದರೆ, ಕೆನ್ನೈಗೈಯಾಗಿ ಕುಳಿತು ದೂರದೃಷ್ಟಿ ಹರಿಸಿದ ಕವಿ - ಕರ್ಮಯೋಗಿ ದಿನಕರ ದೇಸಾಯಿಯವರ ಭಾವಚಿತ್ರ ಹೊಳೆಯುತ್ತದೆ. ಸಾಮಾನ್ಯ ಜನತೆಯ ಅಸಾಮಾನ್ಯ ಹೋರಾಟದ ಫಲವಾಗಿ ಅವರು ಕಟ್ಟಿ ಬೆಳೆಸಿದ ಕೆನರಾ ವೆಲ್‌ಫೆರ್ ಟ್ರಸ್ಟಿನ ಶಿಕ್ಷಣ ಸಂಸ್ಥೆಗಳಲ್ಲಿ ಅಧ್ಯಾಪಕನಾಗಿ, ಉಪನ್ಯಾಸಕಾಗಿ, ಪ್ರಾಚಾರ್ಯನಾಗಿ, ಸಂಸ್ಥೆಯ ಧ್ಯೇಯೋದ್ದೇಶಗಳಲ್ಲಿ ಸಮರಸವಾಗಿ ನಾಲ್ಕು ದಶಕಗಳ ನಿರಂತರ ದುಡಿಮೆಯ ಅನುಭವ ಪಡೆದ, ರೈತ ಹೋರಾಟದ ಕುಟುಂಬದಿಂದಲೇ ಬಂದ ವಿಷ್ಣುನಾಯ್ಕ ಅವರ 'ಜನಸೇವಕ' ಸಂತತಿ ಸಾಮರ್ಥ್ಯದ ಸುಳುಹು ದೊರೆಯಬಹುದಾಗಿದೆ.

ಕಾವ್ಯವನ್ನೇ ತಮ್ಮ ಪ್ರಧಾನ ಅಭಿವ್ಯಕ್ತಿ ಮಾಧ್ಯಮವನ್ನಾಗಿ ಮಾಡಿಕೊಂಡ ವಿಷ್ಣುನಾಯ್ಕ ಅವರ ಕಾವ್ಯಕೃಷಿ ಸಾಕಷ್ಟು ಹುಲುಸಾಗಿಯೇ ಬಂದಿದೆ :

ಗುಡುಗು ಸಿಡಿಲ ನಡುವೆ
ಹೊಳೆವ
ಮಳೆಯ ಬಿಲ್ಲಿನಂತೆ
ಮುಳ್ಳ ಕಂಕುಳಿಂದ ಒಗೆವ
ಚೆಂಗುಲಾಬಿಯಂತೆ
ನೂರಸಹ್ಯ ನೂರುಸಹ್ಯ
ಮೀರಿ ಬಂತು ನನ್ನ ಕಾವ್ಯ

ಎಂದು ಕವಿ ತನ್ನ ಕಾವ್ಯದ ಬಗೆ ಎಂತಹದೆಂಬುದನ್ನು ಸೂಚಿಸಿದ್ದಾನೆ. 'ವೈಯಕ್ತಿಕವಾಗಿ ಯಾವುದೋ ಒಂದು ನೆಲೆಯಲ್ಲಿ ಸೂಕ್ಷ್ಮ ಮನಸ್ಸು ಕಂಡರಿಸಿದ್ದು ಸಮಷ್ಟಿಯ ಅನುಭವವೂ ಆಗಿ ನಮ್ಮ ಮಧ್ಯದ ವಾಸ್ತವಕ್ಕೆ ಕನ್ನಡಿಯಾಗಬೇಕು' ಎಂಬ ಅವರ ನಿಲುವಿಗೆ ತಕ್ಕಂತೆ ಹಲವು ಬಗೆಯ ವಿನ್ಯಾಸಗಳನ್ನು ಅದು ಪಡೆದುಕೊಂಡಿದೆ. ವಸ್ತುಗಳ ಆಯ್ಕೆಯಲ್ಲಿ ಪದ್ಯದ ಗತ್ತಿನಲ್ಲಿ ದಿನಕರ ದೇಸಾಯಿಯವರ ಕಾವ್ಯದಿಂದ ಪ್ರೇರಣೆ ಪಡೆದಿರುವಂತೆ ತೋರಿದರೂ ತನ್ನದೇ ಆದ ಅನುಭವದ ಹೂರಣದಿಂದ ಅದು ಸತ್ವಶಾಲಿಯಾಗಿರುವುದನ್ನು ಕವಿತೆಗಳ ಆಯ್ಕೆ ಮಾಡಿ ನೋಡಬಹುದು.

ಕವಿಯ ಸಾಮಾಜಿಕ ಹೋರಾಟದ ಪ್ರವೃತ್ತಿ ಅವರ ಮಹಾತ್ವಾಕಾಂಕ್ಷೆಯ ಮೊದಲ ಹಂತವಾಗಿ ಪುಸ್ತಕ ಪ್ರಕಾಶನ ಕ್ಷೇತ್ರಕ್ಕೆ ಪ್ರೇರೇಪಿಸಿದ್ದರೆ ಎರಡನೆಯ ಹಂತ ಪತ್ರಿಕಾ ವ್ಯವಸಾಯಕ್ಕೆ ಧುಮುಕುವಂತೆ ಮಾಡಿದೆ. ರಾಘವೇಂದ್ರ ಪ್ರಕಾಶನದ ಮೂಲಕ ಕಾವ್ಯ, ಕಥೆ, ಕಾದಂಬರಿ, ವಿಮರ್ಶೆ, ಪ್ರಬಂಧ, ನಾಟಕ ಹೀಗೆ ಎಲ್ಲ ಸಾಹಿತ್ಯ ಪ್ರಕಾರಗಳನ್ನೂ ಒಳಗೊಂಡಂತೆ ಮೂರು ದಶಕಗಳಲ್ಲಿ ೧೫೦ ಕೃತಿಗಳನ್ನು ಹೊರತಂದಿರುವುದು ಸಣ್ಣ ಸಾಹಸವೇನೂ ಅಲ್ಲ. ಅನೇಕ ಉದಯೋನ್ಮುಖ ಪ್ರತಿಭೆಗಳನ್ನು ಬೆಳಕಿಗೆ ತಂದಿರುವುದಲ್ಲದೆ ಧೀಮಂತ ಹಿರಿಯ ಸಾಹಿತಿ ಗೌರೀಶ ಕಾಯ್ಕಿಣಿಯವರ ಸಮಗ್ರ ಸಾಹಿತ್ಯದ ಹತ್ತು ಸಂಪುಟಗಳನ್ನು ತಾನೇ ಸಂಪಾದಿಸಿ ಪ್ರಕಟಿಸಿದ ಸಾಹಸ ಪವಾಡ ಸದೃಶವಾದದ್ದೆಂದು

ಹೇಳಿದರೆ ತಪ್ಪಾಗದು. ಕಾರಂತರ ಲೇಖನಗಳ ಸಮಗ್ರ ಸಂಪುಟಗಳನ್ನು ಪ್ರಕಟಿಸಿದ್ದು ಮಂಗಳೂರು ವಿಶ್ವವಿದ್ಯಾಲಯದಂಥ ಮಹಾಸಂಸ್ಥೆ ಎಂಬುದನ್ನು ಗಮನಿಸಿದಾಗ ರಾಘವೇಂದ್ರ ಪ್ರಕಾಶನದಂಥ ಖಾಸಗಿ ಸಂಸ್ಥೆಯ ಕಷ್ಟ-ಸುಖಗಳನ್ನು ಊಹಿಸಿಯೇ ತಿಳಿಯಬೇಕು. 'ಮುಗಿಯದ ಹಾಡು' (ಕಣವಿ ಕಾವ್ಯಾಭಿನಂದನ) ಗ್ರಂಥವನ್ನು ಸ್ವಯಂ ಪ್ರೇರಣೆಯಿಂದ ಪ್ರಕಟಿಸಿ (೧೯೯೮) ತಮ್ಮ ಸಂತೋಷವನ್ನು ನನ್ನೊಡನೆ ಹಂಚಿಕೊಂಡ ಈ ಕವಿಮಿತ್ರನ ಪ್ರೀತಿ-ವಿಶ್ವಾಸಗಳನ್ನು ನಾನು ಮರೆಯುವಂತಿಲ್ಲ.

ಕೇವಲ ಪುಸ್ತಕ ಪ್ರಕಾಶನವೊಂದೇ ಇದರ ಗುರಿಯಾಗಿರದೆ ಅದನ್ನು ಜನಪರ ಕಾಳಜಿಯ ಸಾಂಸ್ಕೃತಿಕ ವೇದಿಕೆಯಾಗಿ ರೂಪಿಸಿರುವುದು ಒಂದು ವಿಶೇಷ. ಸಾಹಿತ್ಯ ಗೋಷ್ಠಿ, ಕಾವ್ಯ ಕಮ್ಮಟ, ಸಾಹಿತ್ಯ ಸ್ಪರ್ಧೆಗಳಂತಹ ಚಟುವಟಿಕೆಗಳ ಮೂಲಕ ಹೊಸಬರಿಗೆ ಉತ್ತೇಜನ ನೀಡುತ್ತ ಬಂದಿದೆ. ಪ್ರಕಾಶನದ ಬೆಳ್ಳಿಹಬ್ಬದ ಸಂದರ್ಭದಲ್ಲಿ ತ್ರೈವಾರ್ಷಿಕ ಯೋಜನೆಯೊಂದನ್ನು ರೂಪಿಸಿ ಕಾರ್ಯಪ್ರವೃತ್ತರಾದದ್ದಲ್ಲದೆ ಶುದ್ಧ ಸಾಹಿತ್ಯಕ ವಾತಾವರಣದಲ್ಲಿ (ಅರ್ಥಾತ್ ರಾಜಕಾರಣಿಗಳ ಸಂಪರ್ಕವಿಟ್ಟುಕೊಳ್ಳದೇ) ರಾಜ್ಯಮಟ್ಟದ ಮೂರು ದಿನಗಳ ಕನ್ನಡ ಸಾಹಿತ್ಯ ಸಮ್ಮೇಳನವನ್ನು (೧೯೯೭) ಯಶಸ್ವಿಯಾಗಿ ನಡೆಸಿದ್ದನ್ನು ಪ್ರತ್ಯಕ್ಷವಾಗಿ ಕಂಡು ಅಚ್ಚರಿಪಟ್ಟಿದ್ದೇನೆ. ವಿಷ್ಣು ನಾಯ್ಕ ಸಂಘಟಿಸುವ ಸಭೆ ಸಮಾರಂಭ ಯಾವುದೇ ಆಗಿದ್ದರೂ ಹತ್ತೂಕಡೆಗೆ ದೃಷ್ಟಿಯಿಟ್ಟು ಯಾವುದಕ್ಕೂ ಚ್ಯುತಿ ಒದಗದಂತೆ ಅಚ್ಚುಕಟ್ಟಾಗಿ ನಿರ್ವಹಿಸುವ ಕೌಶಲ ಅವರಿಗೇ ವಿಶಿಷ್ಟವಾದದ್ದು. ಎರಡು ವರ್ಷಗಳ ಹಿಂದೆ ವಿಷ್ಣುನಾಯ್ಕ ವಾರಪತ್ರಿಕೆ ಹೊರಡಿಸುವ ತಮ್ಮ ವಿಚಾರವನ್ನು ತಿಳಿಸಿದಾಗ ನಾನು ನಿಜಕ್ಕೂ ಅಪ್ರತಿಭನಾದೆ. ಯಾವ ರೀತಿಯ ಪ್ರೋತ್ಸಾಹದ ಮಾತುಗಳನ್ನೂ ನಾನು ಆಡಲಿಲ್ಲ. ಇಷ್ಟೇ ಅಲ್ಲ. ಈ ವಿಷಯದಲ್ಲಿ ದುಡುಕದಂತೆ ಸೌಮ್ಯವಾಗಿ ಸೂಚಿಸಿದೆ. ಗೆಳೆಯ ಡಾ. ಜಿ. ಎಂ. ಹೆಗಡೆಯವರೂ ಈ ವಿಷಯದಲ್ಲಿ ನನ್ನನ್ನೇ ಅನುಸರಿಸಿದರು. ಕೆಲಸಗಳ ಭಾರವನ್ನು ಹೊರಲಿಕ್ಕೂ ಒಂದು ಮಿತಿಯಿದೆಯೆಂಬುದು ನಮ್ಮ ಅಭಿಪ್ರಾಯವಾಗಿದ್ದಿತು.

ಆದರೆ ಮುಂದೆ ಕೆಲ ದಿನಗಳಲ್ಲಿಯೇ 'ಸಕಾಲಿಕ' ಸಾಪ್ತಾಹಿಕದ ಮೊದಲ ಸಂಚಿಕೆ ಕೈಗೆ ಬಂದೇ ಬಿಟ್ಟಿತು - 'ಗ್ರಾಮಾಂತರ ಭಾಗದಲ್ಲಿ ಹುಟ್ಟಿ ನಾಡಿನುದ್ದಗಲ ಬೆಳಕನ್ನು ಹಂಚುತ್ತಿರುವ ಅಂಕೋಲೆಯ ಅಕ್ಷರ ಸಂಗಾತಿಯಾಗಿ'. ೧೬ ಪುಟಗಳಲ್ಲಿ ಬರಬರುತ್ತ ಎಷ್ಟೊಂದು ವಿಷಯ ವೈವಿಧ್ಯ! ಎಂಥ ಚಂದವಾದ ವಿನ್ಯಾಸ! ಯಾವ ಮೂಲೆಯಲ್ಲಿಯೂ ಜಾಹಿರಾತುಗಳ ಸುದ್ದಿಯಿಲ್ಲ! ಇದರ ಹಿಂದೆ ದಿನಕರ ದೇಸಾಯಿಯವರು ೧೮ ವರ್ಷಗಳ ಕಾಲ ನಡೆಸಿದ 'ಜನಸೇವಕ'ದ ಸ್ಫೂರ್ತಿ ಇದ್ದೇ ಇದೆ, ಎಂದು ನನ್ನ ನಂಬಿಕೆ.

ಅರವತ್ತು ಮಳೆಗಾಲಗಳನ್ನು ಕಂಡಿರುವ ವಿಷ್ಣುನಾಯ್ಕರ ತರುಣ ಮನಸ್ಸಿನಲ್ಲಿ ಇನ್ನೂ ಯಾವ ವರುಣನ ಎಷ್ಟು ಕನಸುಗಳಿವೆಯೊ ಯಾರು ಬಲ್ಲರು! 'ಮನುಷ್ಯ ಜನ್ಮದ ಸಂಪೂರ್ಣ ಸದ್ಬಳಕೆ' ಅವರ ನಂಬಿಕೆ - ನಿಲುವು. ಅದಕ್ಕೆ ಗೆಲುವನ್ನು ಹಾರೈಸೋಣ.

‘ನಂಬಲಾಗದು ಮತ್ತೆ ಬೀಳು
ಗೋಡೆಗಳಾಂತ ಹುಳಮೆಂದ ಹಳೆಕಂಬ
ನೆಡಬೇಕು ಪಕ್ಕಾ ಹೊಸತಳಿಯ
ಕಂಬಗಳ, - ಸುಭದ್ರ ನಾಳೆಗಳ ನೆಡುವಂತೆ ನಾವು’

ಎಂಬ ಅವರ ‘ಸಂಕಲ್ಪ’ ಕಾಲಕಾಲಕ್ಕೆ ಈಡೇರಲಿ.

‘ಪರಿಮಳದಂಗಳ’ : ೨೦೦೫

೩೧

# ಸೇವಾತತ್ಪರತೆಗೆ ಇನ್ನೊಂದು ಹೆಸರು

೧೯೯೦ರ ಡಿಸೆಂಬರ್ ತಿಂಗಳು. ಹಾಸನದ ಸಾಹಿತ್ಯ ಸಮ್ಮೇಳನ ಮುಗಿಸಿಕೊಂಡು ಬರುವಾಗ ಕಾರ್ಕಳದಲ್ಲಿ ಏರ್ಪಡಿಸಿದ್ದ ದ.ಕ. ಜಿಲ್ಲಾ ಸಾಹಿತ್ಯ ಸಮ್ಮೇಳನದ ಸಮಾರೋಪ ಸಮಾರಂಭದಲ್ಲಿ ಮುಖ್ಯ ಅತಿಥಿಯಾಗಿ ಭಾಗವಹಿಸುವ ಅವಕಾಶ ನನಗೆ ಒದಗಿದ್ದಿತು. ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದ ವ್ಯಾಸರಾಯ ಬಲ್ಲಾಳ, ಎಲ್.ಎಸ್. ಶೇಷಗಿರಿರಾವ್, ಕು.ಶಿ. ಹರಿದಾಸ ಭಟ್ಟ, ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ, ಜಿ. ನಾರಾಯಣ, ಸಾ.ಶಿ. ಮರುಳಯ್ಯ, ಎಂ.ವಿ. ಕಾಮತ್, ಬಿ.ವಿ. ಕಾರಂತ ಮೊದಲಾದ ಇನ್ನೂ ಅನೇಕ ಸಾಹಿತಿಗಳೂ ಕಲಾವಿದರೂ ಭಾಗವಹಿಸಿದ ಸಮ್ಮೇಳನ ಅದಾಗಿದ್ದಿತು. ಪ್ರಾದೇಶಿಕ ವೈಶಿಷ್ಟ್ಯವನ್ನು ಸಾರುವ ವೇದಿಕೆಯ ಅಲಂಕಾರ, ಕಾರ್ಯದರ್ಶಿಗಳಾದ ಎಂ. ರಾಮಚಂದ್ರ ಅವರು ಕಾರ್ಯಕ್ರಮಗಳ ನಿರ್ವಹಣೆಯಲ್ಲಿ ಪಾಲಿಸಿದ ಸಮಯ ನಿಷ್ಠೆ, ಸಭೆಯ ಸುವ್ಯವಸ್ಥೆ, ಉಲ್ಲಾಸಕರವಾದ ಸಾಂಸ್ಕೃತಿಕ ವಾತಾವರಣ - ಒಂದೊಂದೂ ನನ್ನ ಮನಸ್ಸನ್ನು ತುಂಬಿನಿಂತವು. ಜಿಲ್ಲಾ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಇದೆಲ್ಲವನ್ನು ದಕ್ಷತೆಯಿಂದ ಸಂಘಟಿಸಿದ ಹರಿಕೃಷ್ಣ ಪುನರೂರು ಅವರನ್ನು ನಾನು ಕಂಡದ್ದು ಇದೇ ಮೊದಲು. ಅರ್ಧ ತೋಳಿನ ಧವಳ ಶುಭ್ರ ಅಂಗಿ ಮತ್ತು ಪಂಚೆ, ಕೃತಕತೆಯಿಲ್ಲದ ಮುಗುಳು ನಗೆಯ ಪುನರೂರು ಅವರ ಸರಳತೆಯನ್ನು ನೇರ ನಡೆಯನ್ನು ನಾನು ಅಂದು ಮನಸ್ಸಿನಲ್ಲಿಯೇ ಮೆಚ್ಚಿಕೊಂಡೆ.

ಮರುವರ್ಷ (೧೯೯೭) ಮಂಗಳೂರಿನಲ್ಲಿ ನಡೆದ ೬೦ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದ ಕಯ್ಯಾರ ಕಿಞ್ಞಣ್ಣ ರೈ ಅವರಿಗೆ ನನ್ನಿಂದ ಅಧಿಕಾರದ ಹಸ್ತಾಂತರ. ನಾನು ನೋಡಿದ ಸಾಹಿತ್ಯ ಸಮ್ಮೇಳನಗಳಲ್ಲಿಯೇ ಅದು ಅತ್ಯಂತ ಅಚ್ಚುಕಟ್ಟಾದದ್ದು. ಸಮ್ಮೇಳನದ ಕಾರ್ಯಾಧ್ಯಕ್ಷರಾಗಿ ಪ್ರಮುಖ ಪಾತ್ರವಹಿಸಿದ್ದ ಪುನರೂರು ವೇದಿಕೆಯ ಮೇಲೆ ಕುಳಿತದ್ದೇ ಕಡಿಮೆ. ಸ್ವಯಂಸೇವಕನಂತೆ ಅತ್ತಿತ್ತ ಓಡಾಡುತ್ತಿದ್ದುದೇ ಹೆಚ್ಚು. ೬೦ನೇ ಸಮ್ಮೇಳನದ ನೆನಪಿಗೆಂದು ೬೦ ಗ್ರಂಥಗಳ ಅನುದಾನ ಯೋಜನೆಯನ್ನು ಅವರು ಯಶಸ್ವಿಯಾಗಿ ನಿರ್ವಹಿಸಿದ್ದರು. ಸಮ್ಮೇಳನದ ಆವರಣದಲ್ಲಿ ಸುಮಾರು ನಾಲ್ಕುನೂರು ಪುಸ್ತಕ ಮಳಿಗೆಗಳಿದ್ದುದನ್ನು ಕಣ್ಣಾರೆ ಕಂಡು

ನಂಬಲೇಬೇಕಾಯಿತು. ಯಾವ ಶುಲ್ಕವಿಲ್ಲದೆ ಪ್ರಕಾಶಕರಿಗೆ, ಪುಸ್ತಕ ಮಾರಾಟಗಾರರಿಗೆ ಉಚಿತವಾಗಿ ಮಳಿಗೆಗಳನ್ನು ಒದಗಿಸಲಾಗಿತ್ತು. ಪುನರೂರು ಸಾಹಿತಿಯಾಗಿರಲಿಕ್ಕಿಲ್ಲ. ಆದರೆ ಸಾಹಿತ್ಯಾಭಿಮಾನಿಯಾಗಿ, ಪುಸ್ತಕ ಸಂಸ್ಕೃತಿಯ ಪೋಷಕರಾಗಿ ದುಡಿಯುವ ಅವಕಾಶವನ್ನು ಅವರು ನೂರಕ್ಕೆ ನೂರರಷ್ಟು ಸಫಲಗೊಳಿಸಿಕೊಂಡದ್ದು ನನಗೆ ಮನವರಿಕೆಯಾಯಿತು.

೧೯೯೦ ರಿಂದ ೨೦೦೧ರವರೆಗೆ ಹನ್ನೊಂದು ವರ್ಷ ನಿರಂತರವಾಗಿ ಜಿಲ್ಲಾ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಅವರು ಕೆಲಸ ಮಾಡಿದ್ದು ಪರಿಷತ್ತಿನ ಇತಿಹಾಸದಲ್ಲಿಯೇ ಒಂದು ದಾಖಲೆಯೆನ್ನಬಹುದು. ಅದಕ್ಕೆ ತಕ್ಕಂತೆ ಆ ಜಿಲ್ಲೆಯ ಸಾಹಿತ್ಯ ಕ್ಷೇತ್ರಕ್ಕೆ ಸಂಘಟಕರಾಗಿ ಅವರು ಸಲ್ಲಿಸಿದ ಸೇವೆ, ನಡೆಸಿದ ಚಟುವಟಿಕೆಗಳು ಒಂದು ಮಾದರಿಯಾಗಿ ನಿಲ್ಲಬಲ್ಲವು.

೨೦೦೧ರಲ್ಲಿ ಕಾಂತಾವರದ ಕನ್ನಡ ಸಂಘದ ಬೆಳ್ಳಿಯ ಹಬ್ಬ ಹಾಗೂ ೨೦೦೪ರಲ್ಲಿ ಮುದ್ದಣ ಕಾವ್ಯಪ್ರಶಸ್ತಿ ಯೋಜನೆಯ ಬೆಳ್ಳಿಹಬ್ಬ-ಎರಡಕ್ಕೂ ನನ್ನನ್ನು ಡಾ. ನಾ. ಮೊಗಸಾಲೆ ಬರಮಾಡಿಕೊಂಡಿದ್ದರು. ಆ ಸಂದರ್ಭಗಳಲ್ಲಿ ಮೂಲ್ಕಿಯಲ್ಲಿಯ ಪುನರೂರು ಟೂರಿಸ್ಟ್ ಹೊಟೇಲ್‌ನಲ್ಲಿಯೇ ನಮಗೆ ಊಟ, ವಸತಿಯ ಏರ್ಪಾಡು. ಕೆ.ಬಿ. ಜಿನರಾಜ ಹೆಗ್ಡೆ ಸ್ಮಾರಕ ಕನ್ನಡ ಭವನ ಕಾಂತಾವರದಲ್ಲಿ ಸೂರ್ಯಕಾಂತಿ ಪುಷ್ಪದಂತೆ ಅರಳಿ ನಿಂದಿದೆ. ೭.೧೧.೨೦೦೪ ರಂದು ಮುದ್ದಣ ಕಾವ್ಯ ಪ್ರಶಸ್ತಿ ಪುರಸ್ಕೃತ ಕವಿಗಳಿಂದ ಕವಿಗೋಷ್ಠಿ, ವಿಚಾರಗೋಷ್ಠಿ. ಸಂಜೆ ಮುದ್ದಣ ಕಾವ್ಯಪ್ರಶಸ್ತಿ ಯೋಜನೆಯ ಪ್ರಾಯೋಜಕರಾದ ಧರ್ಮದರ್ಶಿ ಹರಿಕೃಷ್ಣ ಪುನರೂರು ಅವರಿಗೆ ಸನ್ಮಾನ. ಇಡೀ ದಿನ ಕಾಂತಾವರದ ನಿಸರ್ಗ ಸೌಂದರ್ಯದೊಡನೆ ಸಾಹಿತ್ಯಾಸಕ್ತರ ಹೃದಯದ ಔದಾರ್ಯವೂ ಬೆರೆತ ಸಂಭ್ರಮ. ಧರ್ಮಾಧಿಕಾರಿ ಡಾ. ವೀರೇಂದ್ರ ಹೆಗ್ಗಡೆಯವರ ಅನುಪಸ್ಥಿತಿಯಲ್ಲಿ ಸನ್ಮಾನದ ಕಾರ್ಯವನ್ನು ನಿರ್ವಹಿಸುವ ಗೌರವ ನನ್ನ ಪಾಲಿಗೆ ಬಂದಿತು. ನನ್ನ ಭಾಷಣದ ಕೊನೆಯಲ್ಲಿ, ಆಗಲೆ ಹೊಳೆದ ಒಂದು ವಿಚಾರವನ್ನು ನಾನು ಪ್ರಸ್ತಾಪಿಸಿದೆ : ಮುದ್ದಣ್ಣ ಕಾವ್ಯ ಪ್ರಶಸ್ತಿಯ ಬೆಳ್ಳಿಯ ಹಬ್ಬದ ಸವಿನೆನಪಿಗೆ ಪ್ರಶಸ್ತಿಯ ಮೊತ್ತವನ್ನು ರೂ. ಐದು ಸಾವಿರದಿಂದ ರೂ. ಹತ್ತುಸಾವಿರಕ್ಕೆ ಹೆಚ್ಚಿಸಿದರೆ ಎಷ್ಟು ಒಳ್ಳೆಯದಾಗಬಹುದಲ್ಲವೆ? ಎಂಬುದೇ ಆ ಸಲಹೆ. ಪುನರೂರು ಅವರು ಸ್ವಲ್ಪವೂ ಹಿಂದೆ ಮುಂದೆ ನೋಡದೆ ಅದಕ್ಕೆ ಸಂತೋಷದಿಂದ ಸಮ್ಮತಿಸಿದರು. ಪುನರೂರು ತಮ್ಮ ಸೃಜನಾತ್ಮಕ ಕಾರ್ಯಗಳಿಂದ ಪಡೆದಿರುವ ಸ್ಥಾನ ದೊಡ್ಡದೆನ್ನುವುದರಲ್ಲಿ ಯಾವ ಸಂದೇಹವೂ ಇಲ್ಲ. ಸಮಾಜಕ್ಕಾಗಿ ದುಡಿದರೆ ಸಮಾಜ ಅಂಥವರನ್ನು ಗುರುತಿಸಿ ಆತ್ಮೀಯತೆಯಿಂದ ತಬ್ಬಿಕೊಳ್ಳದೆ ಇರಲಾರದು. ನಿರಪೇಕ್ಷತೆಯಿಂದ ಸೇವೆ ಮಾಡಿದವರಿಗೆ ಆ ಸೇವೆಯಿಂದ ಸಿಗುವ ಆತ್ಮತೃಪ್ತಿ ಅಮೃತ ಸಮಾನವೆಂದು ಹೇಳಲಾಗುತ್ತದೆ. ಅಂಥ ಒಂದು ತೃಪ್ತಿಯ ಮಂದಹಾಸ ಪುನರೂರವರ ಮುಖದಲ್ಲಿ ಮೂಡಿದ್ದನ್ನು ಅಂದು ಯಾರೂ ಕಾಣಬಹುದಿತ್ತು.

ಮರುದಿನ ಬೆಳಗ್ಗೆ ಪುನರೂರು ಜೊತೆಯಲ್ಲಿಯೇ ಹೊಟೇಲ್‌ನಲ್ಲಿ ಉಪಹಾರ ತೆಗೆದುಕೊಂಡೆವು. ಸಮೀಪದಲ್ಲಿಯೇ ಇರುವ ಪುನರೂರಿಗೆ ಹೋಗಿ ಅವರ ಮನೆಯಲ್ಲಿ ಸ್ವಲ್ಪ ಹೊತ್ತು ಕುಳಿತು ಶ್ರೀಮತಿ ಉಷಾರಾಣಿಯವರ ಆತಿಥ್ಯ ಸ್ವೀಕರಿಸಿ, ಬಳಿಯಲ್ಲಿಯೇ ರಾಶಿಯಾಗಿ ಜೋಡಿಸಿದ್ದ ಹಲವಾರು ದಿನಪತ್ರಿಕೆ, ವಾರಪತ್ರಿಕೆ, ಪಾಕ್ಷಿಕಗಳಲ್ಲಿ ಕಣ್ಣಾಡಿಸಿ 'ಶುಭವಾಗಲಿ' (ಮನೆಯ ಹೆಸರು) ಎಂಬ ಭಾವನೆಯಿಂದ ಹೊರಬಂದೆವು. ಸನಿಹದಲ್ಲಿಯೇ ಒಂದು ಮಹಾದ್ವಾರ. ಒಳಗೆ ಪ್ರವೇಶಿಸಿದೊಡನೆ ಸ್ವಚ್ಛವಾದ, ಸುಂದರವಾದ ಬಯಲಿನಲ್ಲಿ ಒಂದೇ ಮಾದರಿಯ ಅಚ್ಚುಕಟ್ಟಾದ ವಸತಿಗೃಹಗಳ ಸಾಲು. ನಡುವೆ ಅಗಲವಾದ ರಸ್ತೆಗಳು. ಪುನರೂರು ಬಡಬಗ್ಗರಿಗಾಗಿ ಕಟ್ಟಿಸಿರುವ ನೂರು ಮನೆಗಳು! ಒಂದೊಂದು ಸಂಸಾರಕ್ಕೆ ಅಗತ್ಯವಾದ ಎಲ್ಲ ಸೌಕರ್ಯಗಳನ್ನೂ ಒಳಗೊಂಡ ಮನೆಗಳು. ಎದುರಿಗೆ ಮಕ್ಕಳಿಗೆ ವಿಸ್ತಾರವಾದ ಕ್ರೀಡಾಂಗಣ, ಸಭಾಮಂಟಪ ಹಾಗೂ ಕಾರ್ಯಾಲಯ. ಪಕ್ಕದಲ್ಲಿಯೇ ಪ್ರಾಥಮಿಕ ಹಾಗೂ ಪ್ರೌಢಶಾಲೆ. ಒಬ್ಬ ವ್ಯಕ್ತಿಯ ನೆಲೆಯಲ್ಲಿ ಇಂಥ ವಿಶಿಷ್ಟ ಯೋಜನೆ ಪೂರೈಸಿರುವುದನ್ನು ನಾನು ಬೇರೆಡೆ ಕಂಡಿಲ್ಲ. ಪುನರೂರು ಅವರ ಸಾಮಾಜಿಕ ಕಳಕಳಿ ಅವರನ್ನು ಈ ರೀತಿ ಸಾಮಾಜಿಕ, ಶೈಕ್ಷಣಿಕ, ಸಾಹಿತ್ಯ ಧಾರ್ಮಿಕ ಕ್ಷೇತ್ರದಲ್ಲಿ ಕ್ರಿಯಾಶೀಲಗೊಳಿಸಿರುವುದು ದೊಡ್ಡ ಮಾತು. ಎಲ್ಲ ವರ್ಗದ ಜನರೊಡನೆ ಬೆರೆತು, ಸಾಮಾಜಿಕ ಬದುಕಿಗೆ ಒಡ್ಡಿಕೊಂಡು ಹೀಗೆ ಸದ್ದು-ಗದ್ದಲವಿಲ್ಲದೆ ತಮ್ಮನ್ನು ಸೇವಾಕಾರ್ಯಗಳಲ್ಲಿ ತೊಡಗಿಸಿಕೊಳ್ಳುವವರು ವಿರಳ. ದೇವಾಲಯಗಳನ್ನು ಸಾಂಸ್ಕೃತಿಕ ಕೇಂದ್ರಗಳಾಗಿಸುವ ಪ್ರಯತ್ನ, ಮಡಿ-ಮೈಲಿಗೆಗಳನ್ನು ತೊರೆದು ಸಮಾನ ಸಾಮಾಜಿಕ ಕಾರ್ಯವನ್ನು ಒದಗಿಸಬಲ್ಲ ಸೇವಾ ಮಂದಿರಗಳೇ ನಮ್ಮ ದೇವಸ್ಥಾನಗಳಾಗಬೇಕೆಂಬ ಅವರ ಪ್ರಗತಿಪರ ಧೋರಣೆಯನ್ನು ಯಾರೂ ಮೆಚ್ಚಬೇಕಾದದ್ದೆ.

ರಾಜ್ಯ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಸ್ಥಾನಕ್ಕೆ ಸ್ಪರ್ಧಿಸಿ ಮೊದಲ ಸಲ ಸೋತು, ಆಮೇಲೆ ಗೆದ್ದ ಸಂದರ್ಭದಲ್ಲಿ ಪರಿಷತ್ತಿಗಾಗಿ ವಿಶಾಲ ದೃಷ್ಟಿಯಿಂದ ವ್ಯಾಪಕವಾಗಿ ಅವರು ಮಾಡಬೇಕಾದ ಅನೇಕ ಕಾರ್ಯಗಳು ಕಾದುಕೊಂಡಿರುವಾಗ ಅವರ ಅಭಿಮಾನಿಗಳಿಂದಲೇ ಒಂದು ಅನುಚಿತ ಘಟನೆ ಸಂಭವಿಸಿದ್ದು ಮಾತ್ರ ವಿಷಾದನೀಯ. ಮಂಗಳೂರು ಬ್ರಾಹ್ಮಣ ಮಹಾಸಭೆ ಅವರಿಗೆ ಅಭಿನಂದನ ಸಮಾರಂಭ ಏರ್ಪಡಿಸಿದಾಗ ಪುನರೂರರ ಗೆಲುವಿಗಾಗಿ ಶ್ರಮಿಸಿದ ವ್ಯಕ್ತಿಯೊಬ್ಬರು ಹೇಳಿದರು : "ಸಾಹಿತ್ಯ ಪರಿಷತ್ತನ್ನು ಕಟ್ಟಿದವರು ನಮ್ಮ ಬ್ರಾಹ್ಮಣರು. ಆದರೆ ಇತ್ತೀಚೆಗೆ ಅದು ಬ್ರಾಹ್ಮಣರ ಕೈತಪ್ಪಿ ಹೋಗಿತ್ತು. ಹರಿಕೃಷ್ಣರ ಮೂಲಕ ಈಗ ಪುನಃ ಬ್ರಾಹ್ಮಣರು ಪರಿಷತ್ತಿಗೆ ಪ್ರವೇಶ ಪಡೆದಂತಾಯಿತು. ಇನ್ನು ಮುಂದೆ ಇದನ್ನು ಉಳಿಸಿಕೊಳ್ಳುವ ಪ್ರಯತ್ನ ಮಾಡಬೇಕು". ಇದು ಪತ್ರಿಕೆಗಳಲ್ಲಿ ವರದಿಯಾದಾಗ ಇಂಥ ಜಾತೀಯ ಉನ್ಮಾದದ ಅವಿವೇಕವನ್ನು ಕೂಡಲೇ ಪ್ರತಿಭಟಿಸಿ ಹೇಳಿಕೆ ಕೊಟ್ಟವರಲ್ಲಿ ಪ್ರಸಿದ್ಧ ವಿದ್ವಾಂಸರೂ ಸಾಹಿತಿಗಳೂ ಆದ ಡಾ. ಕುಶಾಲಪ್ಪ ಗೌಡ, ರಾಮಚಂದ್ರದೇವ, ಸುಬ್ರಾಯ ಚೊಕ್ಕಾಡಿ, ಪ್ರಭಾಕರ ಶಿಶಿಲ ಮೊದಲಾದವರಿದ್ದರು.

ಧಾರವಾಡ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಹೊಸ ವರ್ಷದ ಚಟುವಟಿಕೆಗಳ ಉದ್ಘಾಟನೆಯ ಸಂದರ್ಭದಲ್ಲಿ (ಎದುರುಬದುರಾಗಿ) ನಾನೂ ಈ ಅವಿವೇಕವನ್ನು ಖಂಡಿಸುತ್ತ ಹೇಳಿದ್ದೆ : "ಹಿಂದೆ ಪ್ರಗತಿಶೀಲ ಸಾಹಿತಿಗಳು ಪರಿಷತ್ತಿನ ಕರ್ಣಧಾರತ್ವವನ್ನು ವಹಿಸಿದ್ದ 'ರಾಜಸೇವಾಸಕ್ತ'ರನ್ನು ಟೀಕಿಸಿದ್ದುಂಟು. ಆದರೆ ಅದು ಇಂಥ ಕೀಳುಮಟ್ಟದ ಜಾತಿ ಕಾರಣಕ್ಕಾಗಿ ಎಂದೂ ಇರಲಿಲ್ಲ. ಅದರ ಜಡತ್ವವನ್ನು ನೀಗಿಸಿ, ಜನಪರಗೊಳಿಸುವ ಸಾಹಿತ್ಯಕ ಹಾಗೂ ಸಾಂಸ್ಕೃತಿಕ ಕಾರಣಗಳಿಗಾಗಿತ್ತು" ಎಂಬುದಾಗಿ. ಮಂಗಳೂರಿನ ಆ ಸಭೆಯಲ್ಲಿಯೇ ಪುನರೂರು ಇಂಥ ಮಾತುಗಳಿಗೆ ತಮ್ಮ ಪ್ರತಿಕ್ರಿಯೆ ವ್ಯಕ್ತಪಡಿಸಿದ್ದರೆ ಅವರಿಗೇ ಒಳಿತಾಗುತ್ತಿತ್ತು. ಆಮೇಲೆ ಅವರು ನೀಡಿದ "ಸಾಹಿತ್ಯ ಪರಿಷತ್ತು ಕನ್ನಡಿಗರದು. ಯಾವುದೇ ಒಂದೇ ಜಾತಿಗೆ ಮೀಸಲಾದುದಲ್ಲ. ಇಲ್ಲಿ ಕನ್ನಡಿಗರೆಲ್ಲರಿಗೂ ಪ್ರವೇಶವಿದೆ" ಎಂಬ ಹೇಳಿಕೆ ಕೊಂಚ ಸಮಾಧಾನವನ್ನುಂಟು ಮಾಡಿದರೂ ಅವರನ್ನು ಕೆಲವರು ಆಗೀಗ ಅನುಮಾನದಿಂದ ನೋಡುವುದು ತಪ್ಪಲಿಲ್ಲವೇನೊ!

ಮುಂದೆ ಪರಿಷತ್ತಿನಲ್ಲಿ ಜಾತಿಯ ಸಂಕುಚಿತ ಭಾವನೆಗೆ ಆಸ್ಪದ ಕೊಡದ ರೀತಿಯಲ್ಲಿ ಅವರು ತಮ್ಮ ಕಾರ್ಯಗಳನ್ನು ಕೈಗೊಂಡು ಸಾಧ್ಯವಾದಷ್ಟನ್ನು ನಿಷ್ಠೆಯಿಂದಲೇ ನಿರ್ವಹಿಸಿದರು. ಮೂರು ವರ್ಷಗಳ ಅವಧಿಯಲ್ಲಿ ಮೂರು ಸಾಹಿತ್ಯ ಸಮ್ಮೇಳನಗಳು ನಡೆಯುವಂತೆ ಪ್ರಯತ್ನಿಸಿದರು. ಸಾಕಷ್ಟು ದತ್ತಿನಿಧಿಗಳನ್ನು ಸಂಗ್ರಹಿಸಿ ಪರಿಷತ್ತಿನ ಆರ್ಥಿಕ ಬಲವನ್ನು ಹೆಚ್ಚಿಸಿದರು. "ನಾನು ಸಾಹಿತಿಯಾಗದೆ ಇರುವುದರಿಂದ ಎಲ್ಲರ ಸಾಹಿತ್ಯವನ್ನು ಗೌರವಿಸುತ್ತೇನೆ" ಎಂಬ ವಿನಯದಿಂದಲೇ ಕನ್ನಡ ಜನತೆಯ ಸಹಕಾರವನ್ನು ಕೋರಿ ಪಡೆದುಕೊಂಡರು. ಈ ದಿಸೆಯಲ್ಲಿ ಜಿ. ನಾರಾಯಣ ಅವರ ಆದರ್ಶವನ್ನು ಪುನರೂರು ಅನುಸರಿಸಿದರೆಂದು ತೋರುತ್ತದೆ. ಜಿ. ನಾರಾಯಣ ಅವರು ತಜ್ಞರಾದ ಹಿರಿಯ ಸಾಹಿತಿಗಳು (ರಂ.ಶ್ರೀ. ಮುಗಳಿ, ಎಲ್.ಎಸ್. ಶೇಷಗಿರಿರಾವ್, ಜಿ.ಎಸ್. ಶಿವರುದ್ರಪ್ಪ, ಸಿದ್ಧಯ್ಯ ಪುರಾಣಿಕ, ಹಾ.ಮಾ. ನಾಯಕ, ದೇ. ಜವರೇಗೌಡ ಮುಂ). ಸಲಹೆಗಳನ್ನು ಪಡೆದುಕೊಂಡೇ ತಮ್ಮ ಮಹತ್ವದ ಸಾಹಿತ್ಯಿಕ ಹಾಗೂ ಸಾಹಿತ್ಯ ಪ್ರಸಾರದ ಯೋಜನೆಗಳನ್ನು ಸ್ವಂತ ವಿವೇಚನೆಯೊಂದಿಗೆ ಸಮಗ್ರ ಕರ್ನಾಟಕ ದೃಷ್ಟಿಯನ್ನಿಟ್ಟುಕೊಂಡು ನಿರ್ವಹಿಸುತ್ತಿದ್ದುದರಿಂದ ಅವುಗಳಿಗೆ ವಿಶೇಷ ಮೆರುಗು ಬರುತ್ತಿತ್ತು. ಪುನರೂರು ಅವರು ಈ ಅಂಶವನ್ನು ಗಮನಿಸಿದ್ದರೆ ಅವರಿಂದ ಇನ್ನೂ ಹೆಚ್ಚಿನ ಸಾಹಿತ್ಯಿಕ ಕೆಲಸಗಳಾಗಬಹುದಿತ್ತೆಂದು ತೋರುತ್ತದೆ. ಆದರೆ ಪರಿಷತ್ತನ್ನು ಆರ್ಥಿಕವಾಗಿ ಬಲಗೊಳಿಸುವಲ್ಲಿ, ಅವ್ಯವಹಾರಗಳಿಗೆ ಆಸ್ಪದ ಕೊಡದೆ ಆಡಳಿತವನ್ನು ಪಾರದರ್ಶಕವಾಗಿಸುವಲ್ಲಿ, ಪುಸ್ತಕ ಪ್ರಕಾಶನ ಹಾಗೂ ಸಾಹಿತ್ಯ ಪರಿಚಾರಿಕೆಯನ್ನು ತೀವ್ರಗೊಳಿಸುವಲ್ಲಿ, ಪರಿಷತ್ತಿನ ಆವರಣವನ್ನು ನವೀಕರಣಗೊಳಿಸುವಲ್ಲಿ ಅವರು ಕೈಗೊಂಡ ಪ್ರಾಮಾಣಿಕ ಪ್ರಯತ್ನಗಳನ್ನು ಯಾರೂ ಅಲ್ಲಗಳೆಯುವಂತಿಲ್ಲ. ಹಾಗೆಯೇ ಅವರ ಸಾಹಿತ್ಯ ಪ್ರೀತಿ, ಕನ್ನಡ ಭಾಷಾಭಿಮಾನ, ಸಾಹಿತಿಗಳ ಬಗೆಗಿನ ಗೌರವಗಳ ಬಗ್ಗೆ ಎರಡು ಮಾತಿಲ್ಲ.

೨೦೦೪ ಜನವರಿ ತಿಂಗಳು ನಡೆದ ನಾಡಗೀತೆಯ ಪ್ರಕರಣ ಹರಿಕೃಷ್ಣರನ್ನು ಸಾಕಷ್ಟು ವಿವಾದಕ್ಕೀಡುಮಾಡಿತು. ಇದರಿಂದ ಕೆಲವು ಸತ್ಯಸಂಗತಿಗಳು ಬೆಳಕಿಗೆ ಬಂದದ್ದು ನಿಜ. ಆದರೆ 'ಕುವೆಂಪುರವರ ಪದ್ಯವೇ ಯಾಕೆ ನಾಡಗೀತೆಯಾಗಬೇಕು? ಕರ್ನಾಟಕದಲ್ಲಿ ಅವರೊಬ್ಬರೇ ಕವಿಗಳೇ....' ಎಂದು ಅವರು ಸಭೆಯೊಂದರಲ್ಲಿ ಆಡಿದ ಲಘುವಾದ ಮಾತು ಇನ್ನಷ್ಟು ಕೋಲಾಹಲಕ್ಕೆ ಕಾರಣವಾಯಿತು. ಸಾಹಿತ್ಯ ಪರಿಷತ್ತಿನಂಥ ಹಿರಿಯ ಪ್ರಾತಿನಿಧಿಕ ಸಂಸ್ಥೆಯ ಅಧ್ಯಕ್ಷರಾಗಿ ಅವರು ಈ ಸಂದರ್ಭದಲ್ಲಿ ಇನ್ನಷ್ಟು ಸಂಯಮವನ್ನೂ ವಿಚಾರವಂತಿಕೆಯನ್ನೂ ತೋರಿಸಬೇಕಾಗಿತ್ತೆಂದು ಸಾರ್ವಜನಿಕರು ಅಪೇಕ್ಷೆಪಟ್ಟಿದ್ದರೆ ತಪ್ಪಲ್ಲ. ಇದರ ಪರಿಣಾಮವಾಗಿ ಮೈಸೂರಿನಲ್ಲಿ ನಡೆದ ಸಾಹಿತ್ಯ ಪ್ರಶಸ್ತಿ ಪ್ರದಾನ ಸಮಾರಂಭವೊಂದರಲ್ಲಿ ಉದ್ರಿಕ್ತರ ಗುಂಪೊಂದು ವೇದಿಕೆಗೆ ಧಾವಿಸಿ ಅವರ ಪಂಚೆಯನ್ನು ಎಳೆಯುವ ಮಟ್ಟಕ್ಕೂ ಹೋದದ್ದು ದುರ್ದೈವದ ಸಂಗತಿ. ಈ ಬಗೆಯ ಪ್ರತಿಭಟನೆ ಅನಾಗರಿಕ ವರ್ತನೆಯೆನ್ನದೆ ವಿಧಿಯಿಲ್ಲ. ಅಂಥ ಸಂದರ್ಭದಲ್ಲಿಯೂ ಪುನರೂರು ವಿಚಲಿತಗೊಳ್ಳದೆ ಇದ್ದುದು ಆಶ್ಚರ್ಯಕರ ಸಂಗತಿ. ಆ ಜನರ ವಿರುದ್ಧ ಪೋಲೀಸರಿಗೆ ದೂರು ಕೊಡುವಂತೆ ಕೆಲವರು ಸೂಚಿಸಿದಾಗ "ಅವರು ಕನ್ನಡಿಗರು. ನಮ್ಮವರೆ. ನಾನು ಅವರ ವಿರುದ್ಧ ದೂರು ನೀಡುವುದಿಲ್ಲ" ಎಂದು ಹೇಳಿ ಯಾವುದೇ ಭಯ ಹಾಗೂ ದ್ವೇಷಕ್ಕೆ ಎಡೆಗೊಡದಂತೆ ನೋಡಿಕೊಂಡದ್ದನ್ನು ಮಾತ್ರ ಮೆಚ್ಚಲೇಬೇಕು.

ಹರಿಕೃಷ್ಣ ಪುನರೂರು ಅವರ ಕಾರ್ಯಕ್ಷೇತ್ರ ಹಾಗೂ ಸೇವಾಕ್ಷೇತ್ರ ವಿಸ್ತಾರವಾಗಿರುವುದರಿಂದ, ಅದರಲ್ಲೂ ಅವರ ಸಮಾಜಮುಖಿ ವ್ಯಕ್ತಿತ್ವಕ್ಕೆ ಈಗಾಗಲೇ ಜನಮನ್ನಣೆ ದೊರಕಿರುವುದರಿಂದ ತಮ್ಮ ಮುಂದಿನ ದಾರಿ ಅವರಿಗೆ ನಿಚ್ಚಳವಾಗಿದೆ. ಆ ದಾರಿಯಲ್ಲಿ ಜನಹಿತಕಾರ್ಯದ ಮೈಲುಗಲ್ಲುಗಳು ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಸ್ಥಾಪನೆಗೊಳ್ಳಲಿ, ಎಲ್ಲ ರೀತಿಯಿಂದಲೂ ಅವರಿಗೆ 'ಶುಭವಾಗಲಿ'.

'ಪುನರೂರು ಪುರಸ್ಕಾರ' ೨೦೦೫

೩.೨

# ಆಧುನಿಕ ಕನ್ನಡ ಕಾವ್ಯ
# ರೂಪ-ವಿನ್ಯಾಸ, ದೃಷ್ಟಿ-ಧೋರಣೆ

ಕನ್ನಡ ಸಾಹಿತ್ಯದ ಪರಂಪರೆ ಭಾರತದ ಅತ್ಯಂತ ಪ್ರಾಚೀನ ಸಾಹಿತ್ಯಗಳಲ್ಲಿ ಒಂದಾಗಿದ್ದು, ದಕ್ಷಿಣದಲ್ಲಿ ತಮಿಳಿನ ತರುವಾಯದ ಸ್ಥಾನವನ್ನು ಅದು ಪಡೆದಿದೆ. ಹೆಚ್ಚಿನ ವಿವರಗಳಿಗೆ ಇಲ್ಲಿ ಕೈ ಹಾಕದೆ ಆಧುನಿಕ ಕನ್ನಡ ಕಾವ್ಯಕ್ಕೆ ಐತಿಹಾಸಿಕ ಹಿನ್ನೆಲೆಯಾಗಿ ಅದರ ಪ್ರಮುಖ ದೃಷ್ಟಿ-ಧೋರಣೆಗಳನ್ನು, ದಿಕ್ಕು-ದೆಸೆಗಳನ್ನು ಪರಿಚಯಿಸುವ ಒಂದು ಪಕ್ಷಿ ನೋಟವನ್ನೊದಗಿಸುವುದಷ್ಟೆ ಇಲ್ಲಿಯ ಉದ್ದೇಶ.

ಉಳಿದೆಲ್ಲ ಸಾಹಿತ್ಯ ಪರಂಪರೆಗಳಂತೆ ಕನ್ನಡ ಸಾಹಿತ್ಯವೂ ತನ್ನ ಮೂಲವನ್ನು ಮೌಖಿಕವಾದ ಜನಪದ ಸಾಹಿತ್ಯದಲ್ಲಿಯೇ ಕಂಡಿರಬೇಕು. ಅದೇನೇ ಇದ್ದರೂ ಅದರ ನಿರ್ದಿಷ್ಟ ಉಗಮವನ್ನು ಹುಡುಕುವುದು ವ್ಯರ್ಥ ಸಾಹಸವಾದೀತು. ಆದರೆ ಕನ್ನಡದಲ್ಲಿ ಉಪಲಬ್ಧವಾದ ಮೊಟ್ಟಮೊದಲ ಗ್ರಂಥ 'ಕವಿರಾಜಮಾರ್ಗ' ಎನ್ನುವುದರ ಬಗ್ಗೆ ಯಾವ ಭಿನ್ನಾಭಿಪ್ರಾಯವೂ ಇಲ್ಲ. ರಾಷ್ಟ್ರಕೂಟ ಚಕ್ರವರ್ತಿಯಾದ ಅಮೋಘವರ್ಷ ನೃಪತುಂಗನೇ (ಕ್ರಿ.ಶ. ೮೧೪-೮೭೭) ಇದನ್ನು ಬರೆದವನು ಎಂಬುದು ಕೆಲವರ ಅಭಿಪ್ರಾಯವಾದರೆ ಅವನ ಆಸ್ಥಾನದಲ್ಲಿದ್ದ ಶ್ರೀವಿಜಯನೆಂಬುವನು ಅದರ ಕರ್ತೃವಾಗಿರಬೇಕೆಂದು ಇನ್ನು ಕೆಲವರ ಅಭಿಪ್ರಾಯ.

ಯಾವುದೇ ಸಾಹಿತ್ಯದ ಅಧ್ಯಯನವನ್ನು ಕೈಗೊಂಡಾಗ ಎದುರಾಗುವ ದೊಡ್ಡ ಸಮಸ್ಯೆಯೆಂದರೆ ಅದರ ಕಾಲವಿಭಾಗ. ಈ.ಪಿ. ರೈಸ್ ಅವರು ಸೂಚಿಸಿದ ಹಳೆಯ ಪದ್ಧತಿಯಂತೆ ಕನ್ನಡ ಸಾಹಿತ್ಯ ಪರಂಪರೆಯನ್ನು ಮುಂದೆ ಕಾಣಿಸಿದ ಅವಧಿಗಳಲ್ಲಿ ವಿಭಾಗಿಸಲಾಗಿದೆ: ಜೈನಯುಗ (ಕ್ರಿ.ಶ. ೧೨ನೆಯ ಶತಮಾನದ ವರೆಗೆ); ವೀರಶೈವ ಯುಗ (ಕ್ರಿ.ಶ. ೧೨ನೇ ಶತಮಾನದಿಂದ ಕ್ರಿ.ಶ. ೧೫ನೆಯ ಶತಮಾನದ ವರೆಗೆ); ವೈಷ್ಣವ ಅಥವಾ ಬ್ರಾಹ್ಮಣ ಯುಗ (ಕ್ರಿ.ಶ. ೧೫ನೇ ಶತಮಾನದಿಂದ ೧೯ನೇ ಶತಮಾನದ ವರೆಗೆ); ಆಧುನಿಕ ಯುಗ. ಕನ್ನಡ ಸಾಹಿತ್ಯದ ಮುನ್ನಡೆಯನ್ನು ಧಾರ್ಮಿಕ ಪ್ರೇರಣೆಯಿಂದ ಅವಲೋಕಿಸಿದಾಗ ಈ ವಿಭಜನೆ ಕೆಲಮಟ್ಟಿಗೆ ಸರಿಯೆನ್ನಿಸಬಹುದು. ಕನ್ನಡ ಸಾಹಿತ್ಯವನ್ನು ಅರಿತುಕೊಳ್ಳಲು ಇದು ತೀರ ಸಂಕುಚಿತವಾದ ವಿಧಾನವೆಂದು ಈಚೆಗೆ ಇದನ್ನು ಆಕ್ಷೇಪಿಸಲಾಗಿದೆ.

ಭಾಷಾರೂಪಗಳಿಗನ್ವಯಿಸಿ ಮುಂದೆ ಕಾಣಿಸಿದ ವಿಭಾಗ ಪದ್ಧತಿಯನ್ನು ಸೂಚಿಸಲಾಗಿದೆ: ಪೂರ್ವದ ಹಳಗನ್ನಡ ಕಾಲ (ಆರಂಭಕಾಲದಿಂದ ಕ್ರಿ.ಶ. ೭೫೦ರ ವರೆಗೆ); ಹಳಗನ್ನಡ ಕಾಲ (ಕ್ರಿ.ಶ. ೭೫೦-೧೧೫೦); ನಡುಗನ್ನಡ ಕಾಲ (ಕ್ರಿ.ಶ. ೧೧೫೦-೧೭೫೦); ಹೊಸಗನ್ನಡ ಕಾಲ (ಕ್ರಿ.ಶ. ೧೫೦೦-೧೮೫೦); ನವಗನ್ನಡ ಕಾಲ (ಕ್ರಿ.ಶ. ೧೮೫೦ರ ಮುಂದಕ್ಕೆ). ಕಾಲಕ್ಕೆ ತಕ್ಕಂತೆ ಅಂದಿನ ಸಾಹಿತ್ಯಿಕ ಚಳುವಳಿಯ ಕೇಂದ್ರದಲ್ಲಿ ನಿಂತ ಪ್ರಮುಖ ಕವಿಗಳನ್ನು ಆಧಾರವಾಗಿರಿಸಿಕೊಂಡು ಮಾಡುವ ವಿಭಾಗವನ್ನು ಜಿ.ಎಸ್. ಶಿವರುದ್ರಪ್ಪನವರು ಬೆಂಬಲಿಸಿದ್ದಾರೆ. ಅದರಂತೆ ಪಂಪಯುಗ, ಬಸವಯುಗ, ಹರಿಹರ ಯುಗ, ಕುಮಾರವ್ಯಾಸ ಯುಗ -ಹೀಗೆ ವಿಭಾಗ ಮಾಡಬೇಕಾಗುತ್ತದೆ. ಅವರ ಇನ್ನೊಂದು ಸೂಚನೆ ಹೆಚ್ಚು ಅನುಕೂಲಕರವಾಗಿದೆ. ಅದೆಂದರೆ ಕನ್ನಡ ಸಾಹಿತ್ಯ ಚರಿತ್ರೆಯನ್ನು ಆಯಾ ಯುಗದಲ್ಲಿ ಹೊಸ ತಿರುವನ್ನು ಪಡೆದ ಕಾವ್ಯದ ಛಂದೋರೂಪಗಳನ್ವಯ ವಿಭಾಗಿಸುವುದು- ಚಂಪೂ, ವಚನ-ರಗಳೆ-ಷಟ್ಪದಿ, ಕೀರ್ತನ-ತ್ರಿಪದಿ-ಸಾಂಗತ್ಯ, ಭಾವಗೀತೆ-ಗದ್ಯ ಎಂದು ನಾಲ್ಕು ವರ್ಗಗಳಲ್ಲಿ. ಇದರ ಪರಿಣಾಮವೆಂದರೆ ಬೇರೆ ಬೇರೆ ಈ ವಿಭಾಗಕಲ್ಪನೆಯಲ್ಲಿ ಒಮ್ಮೆ ಬರುವ ಕವಿಗಣವೇ ಮತ್ತೆ ಮತ್ತೆ ಕಾಣಿಸಿಕೊಳ್ಳುವುದನ್ನು ಶಿವರುದ್ರಪ್ಪನವರು ಗಮನಿಸಿದಂತಿಲ್ಲ. ಜೈನಯುಗ, ಹಳಗನ್ನಡ ಕಾಲ, ಪಂಪಯುಗ, ಚಂಪು ಯುಗ ಇತ್ಯಾದಿ ಕಾಲ ವಿಭಾಗಗಳಲ್ಲಿ ಅದೇ ಕವಿಪುಂಗವರನ್ನೇ ಎದುರುಗೊಳ್ಳುತ್ತೇವೆ. ಹೀಗೆ, ಎಲ್ಲ ಬಗೆಯ ಕಾಲ ವಿಭಾಗ ಕ್ರಮಗಳೂ ಕಡೆಗೆ ತತ್ತ್ವಶಃ ಒಂದೇ ವಿಧವಾದ ಕ್ರಮಕ್ಕೆ ಬರುತ್ತವೆ. ಆದ್ದರಿಂದ ನಾವು ಅವುಗಳನ್ನು ನೇರವಾಗಿ ಮೊದಲನೆಯ, ಎರಡನೆಯ, ಮೂರನೆಯ ಮತ್ತು ನಾಲ್ಕನೆಯ ಯುಗಗಳೆಂದೇ ಕರೆಯಬಹುದು.

ರತ್ನತ್ರಯರೆನಿಸಿದ ಮಹಾಕವಿಗಳಾದ ಪಂಪ, ಪೊನ್ನ, ರನ್ನರ ಪ್ರಾಬಲ್ಯವಿದ್ದ ಮೊದಲನೆಯ ಯುಗದಲ್ಲಿ ಗದ್ಯಪದ್ಯ ಸಮುಚ್ಚಯವೆನಿಸಿದ ಚಂಪೂದಲ್ಲಿಯೇ ಕಾವ್ಯ ಹೊರಹೊಮ್ಮಿತು. ಈ ಅವಧಿಯಲ್ಲಿ ಎರಡು ಸಂಗತಿಗಳು ಒಡೆದುಕಾಣುತ್ತವೆ ಒಂದು ಕವಿಗಳು ರಾಜಾಶ್ರಯದಲ್ಲಿದ್ದದ್ದು. (ಅದನ್ನು ಊಳಿಗಮಾನ್ಯ ಪದ್ಧತಿಯೆಂದು ಭಾವಿಸ ಬಹುದು); ಇನ್ನೊಂದು, ಧಾರ್ಮಿಕ ಭಾವನೆ ಹಾಗೂ ಸಂಪ್ರದಾಯದಲ್ಲಿ ಪಾಲ್ಗೊಳ್ಳುವ ರೀತಿಯಲ್ಲಿ ಕವಿಗಳು ಜನತೆಗೆ ಸಮೀಪವಾಗಿಯೂ ಇದ್ದುದು. ಕಾವ್ಯವಸ್ತುವಿನ ದೃಷ್ಟಿಯಿಂದ ರಾಮಾಯಣ, ಮಹಾಭಾರತದಂಥ ಸಂಸ್ಕೃತ ಮಹಾಕಾವ್ಯಗಳ ಪ್ರಭಾವವೂ ಆಗ ಸಾಕಷ್ಟಿದ್ದಿತು.

ನಿಜವಾದ ರೂಪಾಂತರ ಹಾಗೂ ಗುಣದಲ್ಲಿ ಬದಲಾವಣೆ ಎರಡನೆಯ ಯುಗದ ವೈಶಿಷ್ಟ್ಯ. ಈ ಅವಧಿಯಲ್ಲಿ ಕವಿಗಳು ರಾಜಾಶ್ರಯದ ಅವಲಂಬನೆ-ಆಶ್ರಯಗಳನ್ನು ತಿರಸ್ಕರಿಸಿದರು. ರೂಪ, ವಸ್ತು, ಶೈಲಿಗಳಲ್ಲಿ ಸಾಹಿತ್ಯ ಸಂಸ್ಕೃತದ ಹಿಡಿತದಿಂದ ಹೊರ ಬಂದಿತು. ಬಸವಣ್ಣನವರ ಹಾಗೂ ಇನ್ನಿತರ ವೀರಶೈವ ಶರಣರ 'ವಚನ' ಈ ಯುಗದ ಅತ್ಯಂತ ವಿಶಿಷ್ಟವಾದ ಸಾಹಿತ್ಯ ರೂಪ. ಸಂಸ್ಕೃತ ಛಂದಸ್ಸು ಹಾಗೂ ಸಂಸ್ಕೃತ ಭೂಯಿಷ್ಠ

ಭಾಷೆಯಿಂದ ಅದು ಸಂಪೂರ್ಣ ಮುಕ್ತವಾಗಿದೆ. ಗ್ರಾಂಥಿಕ ಭಾಷೆಯಿಂದ ಭಿನ್ನವಾದ ಆಡುನುಡಿ, ಅವರ ಅಭಿವ್ಯಕ್ತಿಯ ಮಾಧ್ಯಮವಾಯಿತು. ಭಾಷೆಗೆ ಸಂಬಂಧಪಟ್ಟಂತಷ್ಟೇ ಅಲ್ಲ ಇನ್ನೂ ಹೆಚ್ಚಿನ ಅರ್ಥದಲ್ಲಿ ಸಾಹಿತ್ಯ ಜನತೆಯ ಸಮೀಪಕ್ಕೆ ಬಂದಿತು. ಜನರ ಕೆಲಸ ಕಾರ್ಯಗಳು ಮತ್ತು ಆಸಕ್ತಿಗಳು, ವಚನಕಾರರ ಧಾರ್ಮಿಕ ಭಾವನೆಯ ರೀತಿಯಲ್ಲಿ ವ್ಯಕ್ತವಾಗುತ್ತಿದ್ದರೂ. ಸಾಮಾಜಿಕ-ಧಾರ್ಮಿಕ ಹಾಗೂ ಧಾರ್ಮಿಕ-ಆಧ್ಯಾತ್ಮಿಕ ಈ ಇಬ್ಬಗೆಯ ಸಂಬಂಧಗಳು ಅದರಲ್ಲಿ ಪ್ರತಿಬಿಂಬಗೊಂಡಿದ್ದವು. ಸಾಹಿತ್ಯ ಜನತೆಯ ಸಾಮಾಜಿಕ ಪ್ರಜ್ಞೆಗೆ ಸಂಬಂಧಪಡುವಂತೆ ಬಸವಣ್ಣ ಪ್ರಯತ್ನಿಸಿದರೆ, ಇನ್ನುಳಿದ ಕೆಲವು ಮಹತ್ವದ ಕವಿಗಳು ಹೇಳಿಕೇಳಿ ಧಾರ್ಮಿಕ ವಸ್ತುವನ್ನೇ ಆರಿಸಿಕೊಂಡು ಸಾಮಾನ್ಯ ಜನತೆಯಿಂದ ಉದ್ಭವಿಸಿದ ಶರಣರನ್ನೆ ತಮ್ಮ ಕಾವ್ಯದ ನಾಯಕರನ್ನಾಗಿ ಮಾಡಿಕೊಂಡರು. ಹರಿಹರ, ರಾಘವಾಂಕರು ಇದಕ್ಕೆ ಶ್ರೇಷ್ಠ ಉದಾಹರಣೆಯಾಗಿದ್ದಾರೆ. ಅಲ್ಲಮಪ್ರಭುವಿನಂಥ ಕೆಲವರು ಮಾತ್ರ ಇವೆರಡೂ ರೀತಿಗಳನ್ನು ಮೀರಿ ಆಧ್ಯಾತ್ಮಿಕ-ಅನುಭಾವದ ಎತ್ತರಕ್ಕೇರಿ ವಿಹರಿಸಿದ್ದುಂಟು.

ಮೂರನೆಯ ಯುಗದಲ್ಲಿ ಹಿಂದಿನ ಯುಗದ ಮಾದರಿ ಹಾಗೂ ಸಂಪ್ರದಾಯವನ್ನೇ ಬೇರೊಂದು ಸಂದರ್ಭದಲ್ಲಿ ಮುಂದುವರಿಸಲಾಯಿತು. ಈಗ ಸಾಹಿತ್ಯ ಕೀರ್ತನ. ಸಾಂಗತ್ಯ, ತ್ರಿಪದಿ ರೂಪಗಳ ಮುಖಾಂತರ ಸುಲಭವಾದ ರೀತಿಯಲ್ಲಿ ಇನ್ನೂ ಹೆಚ್ಚು ಜನತೆಯ ಸಮೀಪಕ್ಕೆ ಬಂದಿತು. ಹಾಡಿನ ರೂಪದ ಈ ಕಾವ್ಯ ಪ್ರಕಾರಗಳು ನೇರವಾದ ಭಾವನಿರೂಪಣೆಗೆ ಹೆಸರಾದವುಗಳು. ಎರಡನೆಯ ಯುಗದಲ್ಲಿ ವೀರಶೈವವು ಅತ್ಯಂತ ಜನಪ್ರಿಯಾವದ ಧಾರ್ಮಿಕ ಗ್ರಹಿಕೆಯಾಗಿದ್ದರೆ ಈ ಯುಗದಲ್ಲಿ ವೈಷ್ಣವ ಧರ್ಮದ ಪ್ರಭಾವ ವಿಶೇಷವಾಗಿರುವುದನ್ನು ಕಾಣುತ್ತೇವೆ. ಈ ಯುಗದ ಅದ್ವಿತೀಯ ಮಹಾಕೃತಿ ಯೆನಿಸಿದ ಕುಮಾರವ್ಯಾಸ ಭಾರತ ಮಹಾಕಾವ್ಯದ ಬಂಧದಲ್ಲಿ ಭಾಗವತ ದರ್ಶನವನ್ನು ನೀಡಿದೆ. ಭಕ್ತಿಯ ದೃಷ್ಟಿಯಿಂದ ವಚನಕಾರರು ವೀರಶೈವ ಧರ್ಮಕ್ಕೆ ಸಲ್ಲಿಸಿದ ಸೇವೆಯನ್ನು ಹರಿದಾಸರು ವೈಷ್ಣವ ಧರ್ಮಕ್ಕೆ ತಮ್ಮ ಕೀರ್ತನಗಳ ಮೂಲಕ ನೀಡಿದರು. ಈ ದಿಸೆಯಲ್ಲಿ ಹರಿದಾಸರಿಗೆ ಶಿವಶರಣರಿಂದ ಪ್ರೇರಣೆ ದೊರೆತಿರಬಹುದಾಗಿದೆ. ಗೇಯತೆಗೆ ಹೆಸರಾದ ಸಾಂಗತ್ಯ ರೂಪದಲ್ಲಿ ತನ್ನ ವೈಶಿಷ್ಟ್ಯ ಪೂರ್ಣವಾದ ಕಾವ್ಯ ವೈಭವವನ್ನು ಮೆರೆದ ರತ್ನಾಕರವರ್ಣಿ ಈ ಯುಗದ ಇನ್ನೊಬ್ಬ ಮಹಾಕವಿಯಾಗಿದ್ದಾನೆ.

ನಾಲ್ಕನೆಯ ಯುಗಕ್ಕೆ ಕಾಲಿಡುವ ಮುನ್ನ ನಾವು ಮಾಡಬೇಕಾದ ಮುಖ್ಯ ಕೆಲಸವೆಂದರೆ ಆಧುನಿಕ ಯುಗದ ಮುಂಚಿನ ಕನ್ನಡ ಸಾಹಿತ್ಯ ಚರಿತ್ರೆಯನ್ನು ವಿಶಾಲವಾದ ಐತಿಹಾಸಿಕ ಪರಿಭಾಷೆಯಲ್ಲಿ ರೂಪಿಸಿಕೊಡುವುದು. ಸ್ಥೂಲವಾಗಿ ಎರಡು ಬಗೆಯ ಪ್ರವೃತ್ತಿಗಳು ಆಗ ಕಾರ್ಯೋನ್ಮುಖವಾಗಿದ್ದವು. ಅದರ ಪರಿಣಾಮವಾಗಿ ಕನ್ನಡ ಸಾಹಿತ್ಯ ಹೆಚ್ಚು ಹೆಚ್ಚಾಗಿ ಜನಸಾಮಾನ್ಯರಿಗೆ ನಿಲುಕುವಂತೆ ಹಾಗೂ ಸ್ವಾನುಭವಕ್ಕೆ ಸಂವಾದಿಯಾಗುವಂತೆ ರೂಪುದಳೆಯಿತು. ಮೊದಲನೆಯ ಪ್ರವೃತ್ತಿಯನ್ನು ಅ-ಸಂಸ್ಕೃತೀಕರಣವೆಂದು ಕರೆಯ

ಬಹುದು. ಎಂದರೆ ಸಂಸ್ಕೃತ ಸಾಹಿತ್ಯದ ತಂತ್ರವಿಧಾನಗಳು, ಧಾರ್ಮಿಕ-ಸಾಂಸ್ಕೃತಿಕ ಮೌಲ್ಯಗಳು. ನುಡಿಗಟ್ಟು. ಶೈಲಿ, ಶಬ್ದ ಸಂಗ್ರಹ- ಇವುಗಳಿಂದ ಕ್ರಮವಾಗಿ ಮತ್ತು ಪ್ರಗತಿಪರವಾಗಿ ಬಿಡುಗಡೆ ಪಡೆಯುವುದು. ಬ್ರಾಹ್ಮಣ ಧರ್ಮ ಹಾಗೂ ಸಂಸ್ಕೃತ ಭಾಷೆಯ ಕೊಂಡಿ ಬಿಗಿಯಾಗಿದ್ದರೂ ವೈಷ್ಣವ ಸಾಹಿತ್ಯವೂ ಬರುಬರುತ್ತ ಅ-ಸಂಸ್ಕೃತೀಕರಣ ಪಡೆಯಿತು. ಇನ್ನು ಎರಡನೆಯ ಪ್ರವೃತ್ತಿಯನ್ನು 'ಯಥಾರ್ಥತಾವಾದ' ಎಂದು ಕರೆಯಬಹುದು. ಎಂದರೆ, ಸಾಹಿತ್ಯವನ್ನು ಜನತೆಯ ಸಾಮಾಜಿಕ-ಸಾಂಸ್ಕೃತಿಕ ಪ್ರಜ್ಞೆಯ ವಾಸ್ತವಿಕತೆಯ ಅಭಿವ್ಯಕ್ತಿಯನ್ನಾಗಿಸುವುದು. ಇವೆರಡೂ ಪ್ರವೃತ್ತಿಗಳಿಗೆ ಕನ್ನಡ ಸಾಹಿತ್ಯದಲ್ಲಿ ದೊಡ್ಡ ಇತಿಹಾಸವೇ ಇದೆ. ಶಿವರುದ್ರಪ್ಪನವರ ಮಾತಿನಲ್ಲಿ ಹೇಳಬೇಕೆಂದರೆ, ಇವೆರಡೂ ಪ್ರವೃತ್ತಿಗಳು ಕನ್ನಡ ಸಾಹಿತ್ಯ ಪರಂಪರೆಯನ್ನು ನಿರಂತರವಾಗಿ 'ಮಾರ್ಗ'ದಿಂದ 'ದೇಸಿ'ಗೆ ಮಾರ್ಪಡಿಸುತ್ತ ಬಂದಿವೆಯೆನ್ನಬಹುದು. ಇದರಿಂದ ಆಧುನಿಕ ಯುಗದಲ್ಲಿ ಗದ್ಯ ಸಾಹಿತ್ಯ ಪ್ರಾಮುಖ್ಯಕ್ಕೆ ಬರತೊಡಗಿತು.

ಆದಾಗ್ಯೂ, ಐತಿಹಾಸಿಕವಾಗಿ ಶಕ್ತಿಯುತವಾದ ಹಾಗೂ ಪರಿವರ್ತನಶೀಲವಾದ ತನ್ನ ಧ್ಯೇಯ ಮತ್ತು ಮಾದರಿಗಳಿಗೆ ವಿರುದ್ಧವೆಂಬಂತೆ ಕನ್ನಡ ಸಾಹಿತ್ಯ ಒಂದು ಬಗೆಯ ಅಂತಸ್ಸತ್ವದ ಅನನ್ಯತೆಯನ್ನು ಉಳಿಸಿಕೊಂಡು ಬಂದಿದೆ. ಅನುಭವದ ಅನೇಕತೆಯನ್ನು ಒಳಗೊಳ್ಳುವ ಸಾಮರ್ಥ್ಯ ಮತ್ತು ಸಮನ್ವಯ ದೃಷ್ಟಿಯ ಒಲವು, ಇದೇ ಅದರ ತಿರುಳಾಗಿದೆ. ಆಧುನಿಕ ಸಾಹಿತ್ಯದಲ್ಲಿ ಕೂಡ, ಕೆಲಮಟ್ಟಿಗಾದರೂ ಹಿಂದಿನ ರೂಪಗಳ ಎಡೆಬಿಡದ ಸಂಬಂಧಗಳುಂಟು. ಕೆ.ವಿ.ಪುಟ್ಟಪ್ಪನವರ 'ಶ್ರೀ ರಾಮಾಯಣ ದರ್ಶನಂ'ದಲ್ಲಿ ಪ್ರೌಢವಾದ ರೀತಿಯ ಮಹಾಕಾವ್ಯದ ರೂಪ ಕಾಣಿಸಿಕೊಂಡರೆ, ಪರಮೇಶ್ವರ ಭಟ್ಟರಂತಹ ಲೇಖಕರಿಂದ ನಡೆದ ವಚನ ಪ್ರಕಾರದ ಪುನರುಜ್ಜೀವನವನ್ನು ಇಲ್ಲವೆ ಚಂಪುವನ್ನು ಉಪಯೋಗಿಸುವ ವಿ.ಕೆ. ಗೋಕಾಕರ ಪ್ರಯತ್ನಗಳನ್ನು ಇಲ್ಲಿ ಉದಾಹರಿಸಬಹುದು.

೨

ಹತ್ತೊಂಬತ್ತನೆಯ ಶತಮಾನದ ಕೊನೆ ಹಾಗೂ ಇಪ್ಪತ್ತನೆಯ ಶತಮಾನದ ಪ್ರಾರಂಭದ ಹೊತ್ತಿಗೆ ಕನ್ನಡದಲ್ಲಿ ಕಾವ್ಯ ಬರೆಯ ಹೊರಟ ಉತ್ಸಾಹಿಗಳಲ್ಲಿ ನಿರಾಶೆಯ ಅಸ್ಪಷ್ಟ ಭಾವನೆ ಬೆಳೆಯತೊಡಗಿತ್ತು. ಹಳೆಯ ಸಂಪ್ರದಾಯದ ಸತ್ವವೆಲ್ಲ ತೀರಿ ಹೋಗಿರುವನ್ನು ಅವರು ಒಂದೆಡೆ ಕಂಡರೆ, ಮತ್ತೊಂದೆಡೆ ಅದಕ್ಕೆ ಬದಲಾಗಿ ಯೋಗ್ಯವಾದ ಬೇರಾವುದೂ ಅವರಿಗೆ ಗೋಚರಿಸಲಿಲ್ಲ. ಇಂಥ ಗತಿ ಒದಗಿದ್ದು ಕಾವ್ಯಕ್ಕಷ್ಟೇ ಅಲ್ಲ, ಇಡಿಯ ಸಾಹಿತ್ಯಕ್ಕೆ ಎನ್ನಬಹುದು. ನಿಜವಾಗಿ ನೋಡಿದರೆ ಅದು ಬರಿ ಕನ್ನಡ ಸಮಸ್ಯೆಯಾಗಿರದೆ ರಾಷ್ಟ್ರೀಯ ಸಮಸ್ಯೆಯೇ ಆಗಿದ್ದಿತು. ಬೇರೆ ಬೇರೆ ಪ್ರಾದೇಶಿಕ ಭಾಷೆಗಳ ಸಾಹಿತ್ಯವೂ ಬೇರೆ ಬೇರೆ ರೀತಿಯಲ್ಲಿ ಈ ಆತಂಕವನ್ನು ಎದುರಿಸಬೇಕಾಯಿತು. ಅದಕ್ಕೆ ಕಾರಣಗಳು ಸಂಕೀರ್ಣವಾಗಿದ್ದವು. ಸ್ವಲ್ಪಮಟ್ಟಿಗೆ ಅವು ರಾಜಕೀಯಕ್ಕೆ ಸಂಬಂಧಪಟ್ಟಿದ್ದರೂ, ಮುಖ್ಯವಾಗಿ ಸಾಮಾಜಿಕ ಹಾಗೂ ಸಾಂಸ್ಕೃತಿಕ ರೀತಿಯವು.

ಆದರೂ ಹೊಸ ಹಾದಿಯನ್ನು ಕಂಡುಹಿಡಿಯುವ ಪ್ರಯತ್ನಗಳು ಅಲ್ಲಲ್ಲಿ ನಡೆಯದೆ ಇರಲಿಲ್ಲ. ಶಾಂತಕವಿಗಳು, ಹೊಸ ರೀತಿಯಲ್ಲಿ ಶಿಶುಗೀತಗಳನ್ನು ಬರೆದ ಪಂಜೆ ಮಂಗೇಶರಾಯರು, ಇಂಗ್ಲಿಷ್ ಕವನಗಳನ್ನು ಕನ್ನಡದಲ್ಲಿ ಅನುವಾದಿಸಿದ ಹಟ್ಟಂಗಡಿ ನಾರಾಯಣರಾಯರು- ಇಂಥವರ ಪ್ರಯತ್ನಗಳು ಇಲ್ಲಿ ಉಲ್ಲೇಖನೀಯವಾಗಿದೆ. ಆದರೆ ಇವು ತಡಕಾಟಗಳೇ ಹೊರತು ಹೊಸ ಸಾಹಿತ್ಯಕ ಚಳವಳಿಯ ರೂಪಧಾರಣೆ ಪಡೆದವುಗಳಲ್ಲ.

೧೯೨೧ರ ಸುಮಾರಿಗೆ ಬಿ.ಎಂ. ಶ್ರೀಕಂಠಯ್ಯನವರ 'ಇಂಗ್ಲಿಷ್ ಗೀತಗಳು' ಪ್ರಕಟಗೊಂಡಾಗಲೆ ಆಧುನಿಕ ಮನೋಭಾವದ ಜಾಗೃತವಾದ ಸಾಹಿತ್ಯಕ ಆಂದೋಲನ ನಿಜವಾಗಿ ಪ್ರಾರಂಭವಾಯಿತೆನ್ನಬೇಕು. ಹೊಸ ಯುಗವನ್ನೇ ಪ್ರಾರಂಭಿಸಿದ ಈ ಕವನ ಸಂಕಲನದಲ್ಲಿ ಬಿ.ಎಂ. ಶ್ರೀಯವರು ತಮ್ಮ ಕನ್ನಡ ಅನುವಾದದ ಮೂಲಕ ಇಂಗ್ಲಿಷ್ ರೊಮ್ಯಾಂಟಿಕ್ ಕವಿಗಳನ್ನು ಪರಿಚಯ ಮಾಡಿಕೊಟ್ಟರು. ಹೆಸರಾದ ಈ ಕವಿಗಳ ಮಾಲಿಕೆಯಲ್ಲಿ ಕೀಟ್ಸನನ್ನು ಬಿಟ್ಟು ಬಿಟ್ಟಿರುವುದು ಆಶ್ಚರ್ಯಕರವಾಗಿದೆ. ಆದರೆ ಅವರು ಮಾಡಿದ ಮಹತ್ವದ ಕಾರ್ಯ ಇದಕ್ಕೂ ಎಷ್ಟೋ ಪಾಲು ಹೆಚ್ಚಿನದು. ಕೆ.ಡಿ. ಕುರ್ತಕೋಟಿ ಯವರು ಸರಿಯಾಗಿ ಎತ್ತಿ ತೋರಿಸಿರುವಂತೆ ಈ ಕನ್ನಡ ಅನುವಾದಗಳು ಅವಷ್ಟಕ್ಕೇ ಮೂಲಕವಿತೆಗಳೇ ಆಗಿದ್ದು, ಅವುಗಳ ಕಾರ್ಯ ಬರಿ ಅನುವಾದಗಳಾಗಿ ಉಳಿಯುವುದಾಗಿರಲಿಲ್ಲ. ಕನ್ನಡದಲ್ಲಿ ಹೊಸ ಬಗೆಯ ಕಾವ್ಯವನ್ನು ಹೇಗೆ ಬರೆಯಬಹುದು ಎಂಬುದಕ್ಕೆ ಅವು ನಿದರ್ಶನವಾದುವು. ಇವುಗಳಲ್ಲಿ ಎಷ್ಟೋ ಅನುವಾದಗಳು ಇವು ಅನುವಾದಗಳೆಂದು ಹೇಳಿದರೆ ಮಾತ್ರ ಗೊತ್ತಾಗುವಷ್ಟು ಪರಿಪೂರ್ಣ ರೂಪಾಂತರಗಳಾಗಿವೆ. ಅವುಗಳ ಅಂತರ್ಮೌಲ್ಯ ಏನೇ ಇರಲಿ, ಕನ್ನಡ ಕಾವ್ಯದಲ್ಲಿ ಆಧುನಿಕ ಯುಗದ ಬರವನ್ನು ಅವು ಕೈಯೆತ್ತಿ ಸಾರಿದವು.

ಈ ಕಾವ್ಯದ ಮುನ್ನಡೆಗೆ ಪೋಷಕವಾದ ಪ್ರೇರಣೆಗಳು ಯಾವವು? ಮೊದಲನೆಯದಾಗಿ, ಹೊಸ ಬಗೆಯ ಅಂದರೆ 'ಆಧುನಿಕ' ಕಾವ್ಯರಚನೆ ಮಾಡಬೇಕೆಂಬ ಮನಸ್ಸಿನ ಮೂಲಪ್ರೇರಣೆಯಂತೂ ಪ್ರಬಲವಾಗಿತ್ತು. ಇದರಿಂದ ಆಗಿನ ಸಂದರ್ಭದಲ್ಲಿ ಅವರಿಗೆ ಪರಿಚಯವಾಗಿದ್ದ ಇಂಗ್ಲಿಷ್ ಕಾವ್ಯದ ಮಾದರಿಯ ಮೇಲೆ ಕಾವ್ಯ ರೂಪುಗೊಳ್ಳಬೇಕಾಯಿತು. ಭಾರತದಲ್ಲಿ ಆಧುನಿಕತೆಯ ಒತ್ತಡದ ಮಾತು ಬಂದಾಗ ನಮ್ಮ ಮನಸ್ಸಿಗೆ ಒಮ್ಮೆಲೆ ಹೊಳೆಯುವುದು ಇಂಗ್ಲಿಷ್ ಪ್ರಭಾವವೇ. ಯಾಕೆಂದರೆ, ಭಾರತೀಯರಾದ ನಮಗೆ ಆಧುನಿಕತೆಯ ಪ್ರತೀಕವೆಂದರೆ ಹೆಚ್ಚಾಗಿ ಇಂಗ್ಲಿಷ್ ರೂಪದ್ದೇ. ಇದರಿಂದ ಇಂಗ್ಲಿಷ್ ಕಾವ್ಯದ ಪ್ರಭಾವಮುದ್ರೆ ಕನ್ನಡ ಕಾವ್ಯದ ಈ ಬೆಳವಣಿಗೆಯಲ್ಲಿ ಬಹುಮುಖ್ಯವಾದ ಪಾತ್ರವಹಿಸಿತು. ಇದರ ವಿವರವಾದ ಅಭ್ಯಾಸವನ್ನೊಳಗೊಂಡ ಕೃತಿಯೊಂದನ್ನು ಎಸ್. ಅನಂತನಾರಾಯಣ ಅವರು ಪ್ರಕಟಿಸಿದ್ದಾರೆ. ಈ ಪ್ರಭಾವ ಎಷ್ಟೊಂದು ವ್ಯಾಪಕವಾಗಿತ್ತು, ಆಳವಾಗಿತ್ತು ಎಂಬುದನ್ನು ಇದರಲ್ಲಿ ಸೋದಾಹರಣವಾಗಿ ತೋರಿಸಲಾಗಿದೆ. ಮುಖ್ಯವಾದ ಸಂಗತಿಯೆಂದರೆ ಆಧುನಿಕ ಕನ್ನಡ ಕಾವ್ಯದ ಈ ಪ್ರಥಮ ಘಟ್ಟ ಅಥವಾ ನವೋದಯ

ಸ್ವರೂಪ ರೊಮ್ಯಾಂಟಿಕ್ ಅಥವಾ ಭಾವಪ್ರಧಾನವಾಯಿತು. ಇದೆಲ್ಲದರ ಪರಿಣಾಮವೆಂದರೆ ವ್ಯಕ್ತಿಯ ಭಾವಾವೇಶಗಳ ಪ್ರಸ್ತಾವದಲ್ಲಿ ಮುಂಜಾಗ್ರತೆ ಕಡಮೆಯಾದದ್ದು ಹಾಗೂ ಕಾವ್ಯದ ಭಾಷೆಯನ್ನು ಜೀವಂತವಾದ ಆಡುಮಾತಿಗೆ ಸಮೀಪ ತರುವ ಹೊಸ ಪ್ರೇರೇಪಣೆಯೊದಗಿದ್ದು. ಇದೆಲ್ಲ ಸರಿಯೆ. ಆದರೆ ಈಚೆಗೆ ಜಿ.ಎಸ್. ಶಿವರುದ್ರಪ್ಪನವರು ಸೂಚಿಸಿದಂತೆ ನವೋದಯವನ್ನು 'ರೊಮ್ಯಾಂಟಿಸಿಜಮ್'ನ ಜೊತೆ ಸಮಾನವಾಗಿ ಪರಿಗಣಿಸಿದ್ದು ಸರಿಯಲ್ಲ. ಬೇರೆ ಪ್ರೇರಣೆಗಳೂ ಆಗ ಅಸ್ತಿತ್ವದಲ್ಲಿದ್ದುದರಿಂದ ಇದು ಇನ್ನೊಂದು ಪ್ರಮುಖ ಪ್ರೇರಣೆಯತ್ತ ನಮ್ಮ ಗಮನವನ್ನು ಸೆಳೆಯುತ್ತದೆ. ಅದು, ಇದಕ್ಕೆ ವಿರೋಧವಾದದ್ದೆಂದು ತೋರುವ ದೇಶೀಯ ಹಾಗೂ ರಾಷ್ಟ್ರೀಯ ಪ್ರವೃತ್ತಿ. ರಾಷ್ಟ್ರೀಯತೆಯು ಮೂಲತಃ ರಾಜಕೀಯ ಸಂಗತಿಯಾಗಿದ್ದರೂ ಅದಕ್ಕೆ ಅದರ ಸಾಹಿತ್ತಿಕ ಆಯಾಮವೂ ಇದ್ದಿತು. ಸಾಹಿತ್ಯಕ್ಕೆ ಸಂಬಂಧಪಟ್ಟಂತೆ, ತನ್ನ ನಾಡಿನ ಗತಕಾಲದೊಡನೆ ಕವಿ ತನ್ನನ್ನು ಸಂಬಂಧಗೊಳಿಸಿ ಕೊಳ್ಳಬೇಕಾದುದು ಅತ್ಯಂತ ಆವಶ್ಯಕವೆನಿಸಿತು. ಈ ಪರಸ್ಪರ ವಿರುದ್ಧ ಪ್ರೇರಣೆಗಳ ನಡುವಿನ ಬಿಕ್ಕಟ್ಟನ್ನು ಸಂಪೂರ್ಣವಾಗಿ ಅರಿಯದಿದ್ದರೆ ಆಧುನಿಕ ಭಾರತೀಯ ಜೀವನದ ಸಂಧಿಕಾಲದ ಸರಿಯಾದ ಅರ್ಥವಾಗಲಾರದು. ತಮಗೆ ಜನ್ಮ ಕೊಟ್ಟ ನಾಡಿಗೆ ಸಂಬಂಧಪಟ್ಟ ಸಂಗತಿಗಳ ಸ್ಫೂರ್ತಿಯಿಂದಲೇ ಕೆಲವು ಕವಿಗಳು ಕಾವ್ಯ ರಚನೆಗೆ ತೊಡಗಿದ್ದು ಅವರ ಈ ಒಳಗಿನ ಒತ್ತಡಕ್ಕೆ ಅರ್ಥ ನೀಡುತ್ತದೆ. ನವೋದಯ ಕಾವ್ಯದ ಪ್ರಮುಖ ಕವಿಗಳಲ್ಲಿ ಒಬ್ಬರಾದ ದ.ರಾ.ಬೇಂದ್ರೆಯವರು ಟಾಗೋರರನ್ನು ತಮ್ಮ 'ಗುರುದೇವ'ರೆಂದು ಅಂಗೀಕರಿಸುವುದು ಅಗತ್ಯವೆಂದು ಭಾವಿಸಿದರು. ಈ ಅಂಶದಿಂದಾಗಿ ಭಾರತೀಯ ಜೀವನದ ವಿಶಿಷ್ಟ ಅಂಗಗಳೆನಿಸಿದ ನಿವೃತ್ತಿ ಮಾರ್ಗದ ಆದರ್ಶ, ಅನಂತದೊಡನೆ ಒಂದಾಗುವ ಆಧ್ಯಾತ್ಮಿಕ ಹಂಬಲ -ಇವೂ ಕಾವ್ಯದ ವಸ್ತುವಾದವು. ಇಡಿಯ ದೇಶದ ಬಗೆಗೆ ಇಲ್ಲವೆ ತನ್ನ ಪ್ರಾಂತದ ಬಗೆಗೆ ಉತ್ಕಟವಾದ ದೇಶಾಭಿಮಾನದ ಧ್ವನಿಯೂ ಆಗಾಗ ಪುಟಿದೇಳುತ್ತಿತ್ತು. ಈ ಆಂದೋಲನದ ಅತ್ಯಂತ ಪ್ರಾತಿನಿಧಿಕ ಹಾಗೂ ವೈಶಿಷ್ಟ್ಯ ಪೂರ್ಣ ಕವಿಯಾದ ಬೇಂದ್ರೆಯವರ ಪ್ರಾರಂಭದ ಕೃತಿಗಳಲ್ಲಿ ಇದೆಲ್ಲವನ್ನು ಕಾಣಬಹುದು. ಕನ್ನಡ ಕಾವ್ಯದ ಭಾಷೆ ಛಂದಸ್ಸುಗಳನ್ನು ಪೂರ್ಣ ಶೋಧಿಸಿ ಕ್ರಮಪಡಿಸುವ ಮೂರನೆಯ ಪ್ರೇರಣೆಯನ್ನೂ ಇಲ್ಲಿ ನಿವೇದಿಸಬಹುದು. ಭಾಷೆಯ ವಿಷಯದಲ್ಲಿ ನೋಡಿದಾಗ ಕಾವ್ಯದ ಭಾಷೆಯನ್ನು ಆದಷ್ಟು ಮಟ್ಟಿಗೆ ಜೀವಂತವಾದ ಬಳಕೆಗನ್ನಡದ ಉಚ್ಚಾರಣೆ, ನುಡಿಗಟ್ಟು, ಶಬ್ದ ಭಾಂಡಾರದ ಸಮೀಪಕ್ಕೆ ತರುವ ನಿಜವಾದ ಪ್ರಯತ್ನ ಯಶಸ್ವಿಯಾಗಿ ನಡೆಯಿತು. ಜಾನಪದ ಗೀತಗಳ ಹಾಗೂ ಇಂಗ್ಲಿಷ್ ಕಾವ್ಯದ ಪ್ರಭಾವ ಛಂದಸ್ಸಿನ ಮೇಲಾಯಿತು. ಜಾಪದದ ಲಯಗಳನ್ನು, ಲಾವಣಿಯ ಛಂದ್ಸನ್ನು ಯಶಸ್ವಿಯಾಗಿ ಬಳಸಿಕೊಂಡಂತೆಯೇ, ಇಂಗ್ಲಿಷ್ ಕಾವ್ಯದಿಂದ ಸರ ರಗಳೆ, ಮತ್ತು ಅಂತ್ಯ ಪ್ರಾಸಗಳನ್ನು ಸ್ವೀಕರಿಸಲಾಯಿತು. ಸಾನೆಟ್‌ನಂತಹ ವಿಶಿಷ್ಟ ರೂಪಗಳನ್ನೂ ಬಿಡಲಿಲ್ಲ. ನಾಲ್ಕನೆಯದಾಗಿ, ಹಿಂದೆಂದೂ ಕಾಣದಂತಹ ರೀತಿಯಲ್ಲಿ ಭಾವಗೀತಗಳು ಹೊರಹೊಮ್ಮ ತೊಡಗಿದವು.

ಹಿಂದಿನ ಕನ್ನಡ ಕಾವ್ಯದಲ್ಲಿ ಭಾವಗೀತೆಯ ಲಕ್ಷಣಗಳಿರಲಿಲ್ಲವೆಂದಲ್ಲ. ವಚನಗಳಲ್ಲಿ, ಕೀರ್ತನಗಳಲ್ಲಿ ಹಾಗೂ ಸರ್ವಜ್ಞನ ಕೆಲವು ಪದಗಳಲ್ಲಿ ಭಾವಗೀತೆಯ ಅಂಶ ಸಾಕಷ್ಟಿದೆ. ಆದರೆ ದೀರ್ಘವಾದ ಮಹಾಕಾವ್ಯಗಳಿಂದ ತುಂಬಿದ ಕಾವ್ಯಸಂಪ್ರದಾಯದಲ್ಲಿ ಭಾವಗೀತೆ ವಿರಳವಾಗಿತ್ತು. ವ್ಯಕ್ತಿವಾದದ ಹೊಸ ಯುಗದ ಆಹ್ವಾನಕ್ಕೆ ಉತ್ತರವೆಂಬಂತೆ ಕವಿ ವಿವಿಧ ಭಾವಗೀತೆಗಳ ಮುಖಾಂತರ ಜಗತ್ತನ್ನು ನೋಡತೊಡಗಿದನು. ಆದರೆ ಅದೇ ಹಿಂದಿನ ಕವಿಯ ದೃಷ್ಟಿ ಮಹಾಕಾವ್ಯದ ಐಕ್ಯತೆಯ ಮಾಧ್ಯಮದ ಮೂಲಕ ಜಗತ್ತನ್ನು ನೋಡುವದಾಗಿದ್ದಿತು. ಆಧುನಿಕ ಕವಿಗಳು ದೀರ್ಘಕಾವ್ಯಗಳನ್ನೇನೊ ಬರೆದರು, ನಿಜ; ಆದರೆ ಅವು ಮಹಾ ಕಾವ್ಯದ ಸ್ವರೂಪದವಾಗಿರಲಿಲ್ಲ.

ಕನ್ನಡ ಮಾತನಾಡುವ ಜನ ಬೇರೆ ಬೇರೆ ಆಡಳಿತ ಪ್ರದೇಶಗಳಲ್ಲಿ ಹರಿದು ಹಂಚಿ ಹೋದದ್ದರಿಂದ ಬ್ರಿಟಿಷರು ಈ ದೇಶವನ್ನು ತಮ್ಮ ಅಧೀನಕ್ಕೆ ತೆಗೆದುಕೊಡ ರೀತಿಯ ವಿಚಿತ್ರ ವರ್ತನೆಗೆ ಅವರ ಉಪಕಾರ ಸ್ಮರಿಸೋಣ. ಈ ಆಧುನಿಕ ಕಾವ್ಯದ ಆಂದೋಲನಕ್ಕೆ ಒಂದೇ ಒಂದಾದರೂ ಕೇಂದ್ರ ಸ್ಥಳ ಇಲ್ಲದೆ ಹೋಯಿತು. ಆದುದರಿಂದ ಈ ಭಾಷೆಯನ್ನಾಡುವ ಮೂರು ಮುಖ್ಯ ಪ್ರದೇಶಗಳಲ್ಲಿ ಅಂದರೆ ಬ್ರಿಟಿಷರ ಆಡಳಿತಕ್ಕೆ ಒಳಪಟ್ಟ ಮುಂಬೈ ಮತ್ತು ಮದ್ರಾಸ ಪ್ರಾಂತಗಳು ಹಾಗೂ ದೇಶೀ ಸಂಸ್ಥಾನವಾದ ಮೈಸೂರು ಪ್ರಾಂತ ಇವುಗಳಲ್ಲಿ ಅದು ವಿಕೇಂದ್ರೀಕರಣಗೊಳ್ಳದೆ ಗತ್ಯಂತರವಿಲ್ಲದಾಯಿತು. ಬಹುಭಾಷಾ ಪ್ರದೇಶವಾದ ಮುಂಬೈ ಮತ್ತು ಮದ್ರಾಸ ಪ್ರಾಂತಗಳಲ್ಲಿ ಕನ್ನಡ ಭಾಷಿಕರು ಅಲ್ಪಸಂಖ್ಯಾಕರಾಗಿದ್ದರೆ ಮೈಸೂರು ಸಂಸ್ಥಾನದಲ್ಲಿ ಮಾತ್ರ ಅವರು ಪ್ರಬಲವಾಗಿದ್ದರು. ಈ ಆಂದೋಲನವು ಮುಂಬೈ ಪ್ರಾಂತದ ಧಾರವಾಡ, ಮದ್ರಾಸಿಗೆ ಸೇರಿದ ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ಹಾಗೂ ಮೈಸೂರು ಪ್ರಾಂತದ ಮೈಸೂರು ಈ ಮೂರು ಸ್ಥಳಗಳಲ್ಲಿ ಸುಮಾರು ಒಂದೇ ಕಾಲಕ್ಕೆ ಪ್ರಾರಂಭವಾದದ್ದರಲ್ಲಿ ಆಶ್ಚರ್ಯವೇನಿಲ್ಲ. ಹಿಂದಿನ ನಿಜಾಮ ರಾಜ್ಯಕ್ಕೆ ಒಳಪಟ್ಟ ಇನ್ನೂ ಒಂದು ಕನ್ನಡ ಪ್ರದೇಶವಿದ್ದಿತು. ಆದರೆ ಅಲ್ಲಿ ಹೇಳಿಕೊಳ್ಳುವಂಥ ಚಟುವಟಿಕೆ ನಡೆದಂತೆ ಕಂಡುಬರುವುದಿಲ್ಲ. ಕೊಡಗಿಗೆ ಸಂಬಂಧಪಟ್ಟಂತೆ, ಅದರ ಸಾಹಿತ್ಯಿಕ ಚರಿತ್ರೆ ಹಳೆಯ ಮೈಸೂರು ಇಲ್ಲವೆ ಮದ್ರಾಸ ಪ್ರಾಂತಗಳೊಡನೆ ಕೂಡಿಕೊಂಡಿದೆ. ಧಾರವಾಡದಲ್ಲಿ ಬೇಂದ್ರೆಯವರ ಪ್ರತಿಭೆಯ ಪ್ರಭಾವಲಯದಲ್ಲಿ 'ಗೆಳೆಯರ ಗುಂಪು' ಈ ಕಾರ್ಯವನ್ನು ಪರಿಣಾಮಕಾರಿಯಾಗಿ ಕೈಕೊಂಡಿದ್ದರೆ, ಮೈಸೂರಿನಲ್ಲಿ ವಿದ್ವತ್ತಿನ ಖನಿಯಾದ ಬಿ.ಎಂ. ಶ್ರೀಕಂಠಯ್ಯನವರು ಇದಕ್ಕೆ ಮಾರ್ಗದರ್ಶಕರಾಗಿ ದೊರೆತಿದ್ದರು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪಂಜೆ ಮಂಗೇಶರಾವ್ ಹಾಗೂ ಗೋವಿಂದ ಪೈಗಳಂಥವರು ಈ ದಿಸೆಯಲ್ಲಿ ಲವಲವಿಕೆಯಿಂದ ಕೆಲಸ ಮಾಡುತ್ತಿದ್ದರು.

'ಗೆಳೆಯರ ಗುಂಪು' ಆತ್ಮೀಯವಾದ ಸಾಹಿತ್ಯಿಕ ಸ್ನೇಹಪರ ಬಳಗವಾಗಿದ್ದು ವಿ.ಕೆ. ಗೋಕಾಕ, ಆರ್.ಎಸ್. ಮುಗಳಿ, ಮಧುರಚೆನ್ನ ಹಾಗೂ ಬೆಟಗೇರಿ ಕೃಷ್ಣಶರ್ಮ

ಮೊದಲಾದವರು ಅದರ ಪ್ರಮುಖ ಸದಸ್ಯರಾಗಿದ್ದರು. ಬೇಂದ್ರೆಯವರ ಅತ್ಯಂತ ಸ್ನೇಹಪರವಾದ ಹಾಗೂ ಬಹುಮುಖ ಪ್ರತಿಭೆಯ ವ್ಯಕ್ತಿತ್ವ ಇವರೆಲ್ಲರನ್ನು ಒಂದು ಗೂಡಿಸುವ ಶಕ್ತಿಯನ್ನು ಪಡೆದಿದ್ದಿತು. ಕನ್ನಡ ಸಾಹಿತ್ಯವನ್ನು ಜನಸಾಮಾನ್ಯರಿಗೆ ಮುಟ್ಟಿಸುವ ಹೊಣೆಯನ್ನು ಹೊರುವಂಥ ಉದಾತ್ತ ಭಾವನೆ ಈ ಗುಂಪಿನದಾಗಿತ್ತು. ಕ್ರಿ.ಶ. ೧೯೩೦-೪೦ರ ಅವಧಿಯಲ್ಲಿ ಕನ್ನಡ ಭಾಷೆಯಾಡುವ ಬೇರೆ ಬೇರೆ ಪ್ರದೇಶಗಳಲ್ಲಿ ಬೇಂದ್ರೆಯವರ ನಿಚ್ಚ ಪೊಸತಾದ 'ಕುಣಿಯೋಣು ಬಾರ'ದಂಥ ಕವಿತೆಗಳ ವಾಚನ ಮಾಡಿದಾಗ ಜನ ಹೇಗೆ ರೋಮಾಂಚನಗೊಳ್ಳುತ್ತಿದ್ದರೆಂಬುದನ್ನು ಅನೇಕರು ಇನ್ನೂ ಮರೆತಿಲ್ಲ. ಈ ಗುಂಪಿನ ಫಲವಾಗಿ ರೂಪುಗೊಂಡ ಅತ್ಯಂತ ಉನ್ನತ ಮಟ್ಟದ ಪ್ರಭಾವ ಶಾಲಿ ಕವಿ ಎಂದರೆ ದ.ರಾ. ಬೇಂದ್ರೆ ಎಂಬ ಮಾತನ್ನು ವಿಮರ್ಶಕರೂ ಮತ್ತು ವಾಚಕರೂ ಕೂಡಿಯೇ ಒಪ್ಪಿಕೊಳ್ಳುತ್ತಾರೆ. ೧೯೩೨ರಲ್ಲಿ ಪ್ರಕಟವಾದ ಅವರ ಮೊದಲ ಕವನ ಸಂಕಲನ 'ಗರಿ' ಓದುಗರ ಮೈಯಲ್ಲಿ ಮಿಂಚು ಹರಿಸಿತು. ಈ ಕೃತಿಯ ಪ್ರಭಾವ ಮುದ್ರೆ ಎಷ್ಟೊಂದು ಆಳವಾಗಿತ್ತೆಂಬುದು ಇಂದು ನಮ್ಮ ಕಲ್ಪನೆಗೆ ಬರಲಾರದು. ಕನ್ನಡದಲ್ಲಿ ಅದುವರೆಗೆ ಈ ಬಗೆಯ ಕಾವ್ಯವೇ ಬಂದಿರಲಿಲ್ಲ. ಇಷ್ಟೊಂದು ಉನ್ನತ ಮಟ್ಟದ ಸಾಂದ್ರವಾದ ಭಾವಗೀತಗಳನ್ನೊಳಗೊಂಡ ಸಂಗ್ರಹವನ್ನು ಕಾಣುವುದು ಇಂದಿಗೂ ಕಷ್ಟ. ನೋಡಲು ಸರಳವಾದ ಈ ಭಾವಗೀತಗಳಲ್ಲಿ ಬೇಂದ್ರೆಯವರು ಉತ್ತರ ಕರ್ನಾಟಕದ ಬದುಕು ಹಾಗೂ ಭಾಷೆಯ ಸಾರವನ್ನೆಲ್ಲ ಭಟ್ಟಿಯಿಳಿಸಿದರು. ಆದರೆ ಅವುಗಳ ಸರಳತೆ ಮೋಸಗೊಳಿಸುವಂಥದು. ಯಾಕೆಂದರೆ ಅದರಲ್ಲಿ ಹುದುಗಿದ ಭಾಷೆ, ಹಾಗೂ ತಂತ್ರಗಳ ಸಂಕೀರ್ಣತೆಯನ್ನು ಅದು ಆಳದಲ್ಲಿ ಒಳಗೊಂಡಿರುತ್ತದೆ. ಅವರ ಕಾವ್ಯದ ವಸ್ತು ಸೂರ್ಯಚಂದ್ರರಷ್ಟು ಹಳೆಯದೇ. ಸೂರ್ಯ-ಚಂದ್ರರ ಬೆಳಕು ನಾಡಪ್ರೇಮ, ನಿಸರ್ಗ, ಗಂಡು-ಹೆಣ್ಣು, ಹುಟ್ಟು-ಸಾವು ಇತ್ಯಾದಿ. ಕೆಲವು ಭಾವಗೀತಗಳಲ್ಲಿ ಭಾರತೀಯ ಅನುಭಾವದ ವಿಶಿಷ್ಟ ಶಕ್ತಿ ಬಣ್ಣಕಟ್ಟಿ ನಿಂತಿದೆ. ಈ ಪ್ರಾರಂಭಿಕ ಕವಿತೆಗಳಲ್ಲಿ ಮನುಷ್ಯ ವ್ಯಕ್ತಿ ಬೇಂದ್ರೆ ಕಾವ್ಯದ ಗಟ್ಟಿಮುಟ್ಟಾದ ಕೇಂದ್ರವಾಗಿದ್ದನು. ಪದವಿನ್ಯಾಸ ಹಾಗೂ ಛಂದೋವಿಧಾನದಲ್ಲಿ ಜನಪದ ಹಾಡುಗಳ, ವಚನಗಳ, ದಾಸರ ಪದಗಳ ಪ್ರಭಾವನ್ನು ಅರಿಗಿಸಿಕೊಂಡಿರುವುದಲ್ಲದೆ ಎಲ್ಲಕ್ಕೂ ಮಿಗಿಲಾಗಿ ತನ್ನ ಸುತ್ತು ಮುತ್ತು ಜನ ಆಡುವ ಭಾಷೆಗೆ ಅವರು ಚೆನ್ನಾಗಿ ಕಿವಿಗೊಟ್ಟಿದ್ದರು. ಅವರ ಪ್ರಯತ್ನಗಳ ಪರಿಣಾಮ ನಾಲಗೆಯ ಮೇಲೆ ಸಹಜವಾಗಿ ಸುಳಿಯುವ ಸಾದಾ ಜನಪದ ಲಘು ಗೀತೆಗಳಂತಿರುವ ಸರಳ ಕವಿತೆಗಳಾಗಿದ್ದರೂ ಲಕ್ಷ್ಯಪೂರ್ವಕ ಪರಿಶೀಲಿಸಿದಾಗ ಇಂಥ ಸರಳವಾದ ಭಾವನೆಗಳನ್ನು ಅದು ಹೋಗಲಾಡಿಸುತ್ತದೆ. ಅವರ ಕಾವ್ಯದ ವೈವಿಧ್ಯಪೂರ್ಣವಾದ ಛಂದಸ್ಸು ಹಾಗೂ ಭಾಷೆಯ ಅತ್ಯಂತ ಚಮತ್ಕಾರಕವಾದ ನಿರ್ವಹಣೆ ಬೆರಗುಗೊಳಿಸುವಂಥವು. ಅವರ ಕಾವ್ಯ ಪ್ರತಿಮೆಗಳು ಬೇರೆ ಬೇರೆ ಅರ್ಥಗಳ ಸ್ತರಗಳನ್ನೊಳಗೊಂಡು ಜಟಿಲವಾಗದೆ ಇಲ್ಲ. ಬೇಂದ್ರೆಯವರ ಇತ್ತೀಚಿನ ಕಾವ್ಯದಲ್ಲಿ ಮನುಷ್ಯನಿಗೆ ಸಂಬಂಧಪಟ್ಟ ವಿಶಾಲವಾದ

ರೀತಿಯ ಮಾನವೀಯತೆಯ ಸ್ಥಾನವನ್ನು ಅದಕ್ಕಿಂತ ಮಹತ್ತರವಾದ, ಮಾನವನನ್ನು ಮೀರಿದ ಹಾಗೂ ಪರತತ್ವ ವಿಚಾರ ನಿರೂಪಣೆ ಆಕ್ರಮಿಸಿದೆ. ಈ ಬಗೆಯ ಬರವಣಿಗೆಯಲ್ಲೆಲ್ಲ ಶ್ರೀ ಅರವಿಂದರ ಪ್ರಭಾವವನ್ನು ಸಹಜವಾಗಿ ಗುರುತಿಸಬಹುದು. 'ಮಾತು-ಮೌನ' ಕವಿತೆಯಲ್ಲಿನಂತೆ ಅವರ ಕಾವ್ಯವಸ್ತು ಸ್ಪಷ್ಟವಾಗಿ ಆಧ್ಯಾತ್ಮಿಕವಾಗಿರುವುದಲ್ಲದೆ, ಭಾಷೆಯೂ ತಿರುಚು ಮುರುಚಾಗಿದೆ. ಆದರೆ ಬೇಂದ್ರೆಯವರ ಕಾವ್ಯದ ತೋರಿಕೆಯ ವಸ್ತು ಯಾವುದೇ ಇರಲಿ ಅದು ಮೊದಲಿನಿಂದಲೂ ಆಧ್ಯಾತ್ಮವನ್ನು ಬಳಸಿಕೊಂಡೇ ಬಂದಿದ್ದು, ಅವರ ಈಚಿನ ಸಂಗ್ರಹ 'ನಾಕು ತಂತಿ' ಈ ಬಗೆಯ ತೊಡಕಿನ ಅಭಿವ್ಯಕ್ತಿಗೆ ವಿಶಿಷ್ಟ ಉದಾಹರಣೆಯಾಗಿದೆ.

ವಿ.ಕೆ. ಗೋಕಾಕರ ಕಾವ್ಯ ವ್ಯವಸಾಯ ಸ್ವಾರಸ್ಯಕರವಾಗಿದೆ. ಅವರ ಕವಿತೆಗಳ ಪ್ರೇರಣೆ ನಿಜವಾಗಿ ನೋಡಿದರೆ ಭಾವಗೀತಾಪ್ರಧಾನವಾದುದಲ್ಲ. ಕವಿಯಾಗಿ ಅವರು ಆತ್ಮಾಭಿವ್ಯಕ್ತಿಯಲ್ಲಿ ಅಷ್ಟೊಂದು ಆಸಕ್ತಿ ವಹಿಸಿದಂತೆ ತೋರುವುದಿಲ್ಲ. ಅವರು ಪ್ರಜ್ಞಾಪೂರ್ವಕವಾಗಿ ತಮ್ಮನ್ನು ಬಿಟ್ಟು ಹೊರಗಿನ ವಸ್ತುಗಳ ಬಗ್ಗೆ ಚಿಂತನೆ ನಡೆಸುವಂತೆ ತೋರುತ್ತದೆ. ಅವರ ವಾಕ್ಸರಣಿಯಲ್ಲಿ ಭಾವೋದ್ರೇಕದ ಅಂಶ ತೀರ ಕಡಿಮೆ. ಅವರ ಪ್ರಾರಂಭದ ಬರವಣಿಗೆ ಪ್ರಾಚೀನ ಪ್ರೌಢ ಪ್ರಯೋಗವನ್ನನುಸರಿಸಿದ್ದೆಂದೇ ಹೇಳಬಹುದು. ನವೋದಯವನ್ನು 'ರೋಮ್ಯಾಂಟಿಸಿಜಮ್'ದ ಜೊತೆಗೆ . ಸರಳವಾಗಿ ಸಮೀಕರಿಸುವವರಿಗೆ ಇದೊಂದು ಮಹತ್ವದ ಎಚ್ಚರಿಕೆಯಾಗಿದೆ. ತೀರ ಇತ್ತೀಚಿನ ಕಾವ್ಯದ ಮಾದರಿಗಳನ್ನು ಸಹ ಗೋಕಾಕರು ಲಕ್ಷ್ಯದಲ್ಲಿಟ್ಟುಕೊಂಡು ಬಂದವರಾಗಿದ್ದಾರೆ. ೧೯೫೦ರ ಮುಂಬೆ ಸಾಹಿತ್ಯ ಸಮ್ಮೇಳನದಲ್ಲಿ ನವ್ಯ ಕಾವ್ಯವೆಂದು ತಾವೇ ನಾಮಕರಣ ಮಾಡಿದ ಹೊಸ ಶೈಲಿಯ ಕಾವ್ಯದ ಬಗ್ಗೆ -ಆ ಬಗೆಯ ಕಾವ್ಯ ಸೃಷ್ಟಿ ಕನ್ನಡದಲ್ಲಿ ಇನ್ನೂ ಅಷ್ಟಾಗಿ ನಡೆದಿರದಿದ್ದರೂ- ಗೋಕಾಕರು ತಾತ್ವಿಕ ಅಂಶಗಳನ್ನು ಪ್ರಥಮ ಬಾರಿಗೆ ಮಂಡಿಸಿದರು. ಅವರು ಪ್ರತಿಪಾದಿಸಿದ ಈ ಹೊಸ ಬಗೆಯ ಕಾವ್ಯ ಕವಿಯ ವ್ಯಕ್ತಿತ್ವ ಪ್ರಜ್ಞೆ ಹಾಗೂ ಆತ್ಮಾನ್ವೇಷಣೆಯನ್ನು ಹೆಚ್ಚಿನ ಮಟ್ಟದಲ್ಲಿ ಬಯಸುವುದಾಗಿದ್ದಿತಲ್ಲದೆ ಬದಲಾಯಿಸುತ್ತಿರುವ ಸಾಮಾಜಿಕ ಸ್ಥಿತಿಗತಿಗಳಿಗೆ ಹೆಚ್ಚು ಸಹಾನುಭೂತಿಪರವಾಗಿರುವಂತೆ ಮಾಡಿತು. ಇಲಿಯಟ್, ಆಡೆನ್ ಮತ್ತು ಡೈಲಾನ್ ಥಾಮಸ್ ಮೊದಲಾದವರ ಕಾವ್ಯದಿಂದ ಸ್ಫೂರ್ತಿ ಪಡೆಯಲು ಹೊಸ ಕವಿಗಳಿಗೆ ಅವರು ಪ್ರಚೋದಿಸಿದುದರ ಜೊತೆಗೆ ಅಂಧಾನುಕರಣೆಯ ಬಗ್ಗೆ ಸಾಕಷ್ಟು ಎಚ್ಚರಿಕೆಯನ್ನೂ ನೀಡಿದರು. ಗೋಕಾಕರೇ ಸ್ವತಃ ನವ್ಯ ಶೈಲಿಯನ್ನು ಇತ್ತೀಚೆಗೆ ಬಿಟ್ಟುಕೊಟ್ಟು ಸುಲಭಗ್ರಾಹ್ಯವಾದ ರೀತಿಯನ್ನು ಅನುಸರಿಸುತ್ತಿದ್ದಾರೆ. ಆಧುನಿಕ ಕನ್ನಡ ಕಾವ್ಯದ ಮಹತ್ವದ ದ್ವಿತೀಯ ಘಟ್ಟವಾದ ನವ್ಯಕಾವ್ಯಕ್ಕೆ ಗೋಕಾಕರ ಕೊಡುಗೆ ಕಾವ್ಯ ನಿರ್ಮಾಣಕ್ಕಿಂತ ತಾತ್ವಿಕ ದೃಷ್ಟಿಯಿಂದ ಹೆಚ್ಚು ಮಹತ್ವದ್ದೆಂದು ಹೇಳಿದರೆ ತಪ್ಪಾಗದು.

ನವೋದಯ ಮಾರ್ಗದಲ್ಲಿ ಬರೆಯಲು ಪ್ರಾರಂಭಿಸಿದ ಮುಗಳಿಯವರಿಗೆ ನವ್ಯ ಕಾವ್ಯದ ರೀತಿಯಲ್ಲಿ ಬರೆಯುವ ಅಗತ್ಯ ಕಂಡುಬಂದಂತೆ ತೋರುವುದಿಲ್ಲ. ಅವರ ಕಾವ್ಯ

ಸಾಂಪ್ರದಾಯಿಕ ರೋಮ್ಯಾಂಟಿಕ್ ರೀತಿಯದೇ ಇದ್ದು ಇಂಥ ಕಾವ್ಯದ ಲಾಭಾಂಶವನ್ನು ಅದು ಚೆನ್ನಾಗಿ ಪಡೆದಿದೆ. ಅದರ ನಿರೂಪಣೆ ಸರಳ, ಭಾಷೆ ಶುದ್ಧ, ಛಂದಸ್ಸು ಗಟ್ಟಿ ಮುಟ್ಟಾಗಿ ರೂಪುಗೊಂಡಿರುವಂಥದ್ದು. ಬೆಟಗೇರಿ ಕೃಷ್ಣಶರ್ಮರೂ ಸಹ ಸಂಪ್ರದಾಯದ ವಸ್ತುವನ್ನೇ ಆರಿಸಿಕೊಂಡು ಅದೇ ರೀತಿಯಲ್ಲಿಯೇ ತಮ್ಮ ಕುಶಲಕರ್ಮವನ್ನು ತೋರಿಸಿದ್ದಾರೆ. ಇಂಥ ಪದ್ಯಗಳ ರಚನೆಯನ್ನು ವಿರೋಧಿಸಿ ಈ ಮಾತುಗಳನ್ನು ಹೇಳಲಾಗಿದೆಯೆಂದು ಯಾರೂ ಭಾವಿಸಕೂಡದು. ಕಾವ್ಯದ ಮಹಲು ವಿಸ್ತಾರವಾದದ್ದಿದ್ದು ಅನೇಕ ಬಗೆಯ ಪದ್ಯ ಪ್ರಕಾರಗಳನ್ನು ಒಳಗೊಳ್ಳುವ ವೈಶಾಲ್ಯ ಅದಕ್ಕಿದೆ. ಈ ಕವಿಗಳು ಕಾವ್ಯದ ಗೇಯತೆಯ ಬಗೆಗೂ ಗಮನ ಕೊಟ್ಟಿರುವುದರಿಂದ ಅವರ ಕವಿತೆಗಳು ಹಾಡಿಗೂ ಚೆನ್ನಾಗಿ ಒಗ್ಗಿಬಂದಿವೆ.

ಬೇಂದ್ರೆಯವರ ತರುವಾಯ ಗೆಳೆಯರ ಗುಂಪಿನ ಕವಿಗಳಲ್ಲಿ ಮಧುರಚೆನ್ನರು ಪ್ರಬಲವಾದ ಕಾವ್ಯಶಕ್ತಿಯನ್ನು ಪಡೆದವರಾಗಿದ್ದರು. ಬೇಂದ್ರೆಯವರಂತೆ ಅವರೂ ಜಾನಪದ ಸಂಪ್ರದಾಯಗಳ ಆಳವಾದ ಪ್ರಭಾವಕ್ಕೆ ಒಳಗಾಗಿದ್ದರು. ಅವರ ಮನೋಧರ್ಮವೇ ಅನುಭಾವಿ ಕವಿಯದಾಗಿದ್ದಿತು. 'ದೇವತಾ ಪೃಥಿವಿ' ಇದಕ್ಕೆ ತಕ್ಕ ನಿದರ್ಶನವಾಗಿದೆ. ಅನುಭಾವದ ಅಭಿವ್ಯಕ್ತಿಯಲ್ಲಿ ಅನಿರ್ವಚನೀಯವಾದ ಸೌಂದರ್ಯವನ್ನು ಪಡೆದಿದೆ ಅವರ ಶೈಲಿ:

> ಕಾಣದ ಆ ಕುರುಡೂ ಕಾಣೂವ ಈ ಕುರುಡು |
> ಕಂಡೇನು ಕಾಣದಿದ್ದೇನು | ಏಳಮ್ಮಾ
> ಮಲಗಿರುವ ತಾಯಿ ಪೃಥಿವೀ ||

ಮೈಸೂರು ಪ್ರದೇಶದಲ್ಲಿ ಲೇಖಕರಿಗೆ ಆಚಾರ್ಯ ಬಿ.ಎಂ.ಶ್ರೀಕಂಠಯ್ಯನವರ ಮುಂದಾಳುತನ ಲಭಿಸಿದ್ದಿತು. ಧಾರವಾಡದಲ್ಲಿ ಗೆಳೆಯರ ಗುಂಪು ಕಾರ್ಯಪ್ರವೃತ್ತವಾದ ಸಮಯದಲ್ಲಿಯೇ ಅಲ್ಲಿ 'ತಳಿರು' ಮತ್ತು 'ಕಿರಿಯರ ಕಾಣಿಕೆ'ಯಂಥ ಮಹತ್ವದ ಕವನಸಂಕಲನಗಳು ಪ್ರಕಟಗೊಂಡವು. ಕೆ.ವಿ. ಪುಟ್ಟಪ್ಪ, ಪು.ತಿ. ನರಸಿಂಹಾಚಾರ, ಜಿ.ಪಿ. ರಾಜರತ್ನಂರಂತಹ ಹೆಸರುಗಳನ್ನು ಮೊದಲಬಾರಿಗೆ ಈ ಸಂಕಲನಗಳು ಓದುಗರಿಗೆ ಪರಿಚಯ ಮಾಡಿಕೊಟ್ಟವು. ಮಾಸ್ತಿ ವೆಂಕಟೇಶ ಅಯ್ಯಂಗಾರ, ಡಿ.ವಿ. ಗುಂಡಪ್ಪನವರಂತಹ ಹಿರಿಯ ಕವಿಗಳಂತೂ ಸರಿಯೆ. ಈ ಕವಿಗಳಿಗೂ ಗೆಳೆಯರ ಗುಂಪಿನ ಕವಿಗಳಿಗೂ ಅಂತರವಿದ್ದಿತು. ಗೆಳೆಯರ ಗುಂಪಿನಲ್ಲಿ ಆಧ್ಯಾತ್ಮಿಕ ಒಲವು ಎದ್ದು ಕಾಣುವಂತಿದ್ದು, ಜನಪದ ಸಾಹಿತ್ಯದ ಪ್ರಭಾವ ಅವರ ಮೇಲೆ ನೇರವಾಗಿದ್ದಿತು. ಮೊದಲು ಹಿರಿಯ ಕವಿಗಳಾದ ಮಾಸ್ತಿ ವೆಂಕಟೇಶ ಅಯ್ಯಂಗಾರ ಹಾಗೂ ಡಿ.ವಿ. ಗುಂಡಪ್ಪನವರ ಕಾವ್ಯ ಕೃತಿಗಳನ್ನು ನಾವು ಗಮನಿಸಬಹುದು. ಪ್ರಾದೇಶಿಕವಾಗಿ ಈ ಗುಂಪಿನವರಲ್ಲವಾದರೂ ಅವರ ಜೊತೆಗೆ ಇನ್ನೊಬ್ಬ ಹಿರಿಯ ಕವಿ ಗೋವಿಂದ ಪೈಯವರ ಹೆಸರನ್ನೂ ಸೇರಿಸಬಹುದು. ಗೋವಿಂದ ಪೈ ಅವರ ಕಾವ್ಯ ಇವರ ಕಾವ್ಯದ ಜೊತೆಗೆ ಸಾಕಷ್ಟು ಸಮಾನ

ಗುಣಗಳನ್ನು ಹೊಂದಿದೆ. ಕಿರುಭಾವಗೀತೆಗಿಂತ ದೀರ್ಘ ಕವನಗಳಲ್ಲಿ ಪೈ ಅವರ ಕಾವ್ಯ ಪ್ರತಿಭೆ ಚೆನ್ನಾಗಿ ವ್ಯಕ್ತವಾಗಿದ್ದರೂ ಕನ್ನಡದಲ್ಲಿ ಸಾನೆಟ್ ರೂಪವನ್ನು ಮೊಟ್ಟ ಮೊದಲು ತಂದವರು ಅವರು ಎಂಬುದನ್ನು ಮರೆಯುವಂತಿಲ್ಲ. ಅವರ ಭಾಷೆ ಸಂಪ್ರದಾಯಬದ್ಧ ವಾಗಿದ್ದು ಮಹಾಕಾವ್ಯದ ಓಟಕ್ಕೆ ಅನುರೂಪವಾದದ್ದು. ಮಾಸ್ತಿಯವರು ಕನ್ನಡ ಸಣ್ಣ ಕತೆಯ ಜನಕರೆಂದು ಹೆಸರಾದವರು. ಅವರ ಕಾವ್ಯದ ಧಾಟಿ ಗದ್ಯದ ಲಯ ಹಾಗೂ ಸಂಭಾಷಣೆಯ ಸೊಗಸನ್ನು ಚೆನ್ನಾಗಿ ಸಾಧಿಸಿದೆ. ಆದರೆ ಅವರ ಕಾವ್ಯದ ಆತ್ಮ ಧಾರ್ಮಿಕವಾದದ್ದು. ಅದೇನೇ ಇದ್ದರೂ ಕಾವ್ಯದ ಭಾಷೆಯನ್ನು ಆಡುಮಾತಿಗೆ ಸಮೀಪ ತರುವಲ್ಲಿ ಇದು ಅವರ ಮಹತ್ವದ ಪ್ರಯತ್ನವೆಂದೇ ಹೇಳಬಹುದು. ಡಿ.ವಿ. ಗುಂಡಪ್ಪನವರ ಕಾವ್ಯ ಹೆಚ್ಚಾಗಿ ನೀತಿಪರವಾದದ್ದು. ಸಾರೋಕ್ತಿಗಳು ಅವರ ಪದ್ಯಗಳ ತಿರುಳಾದರೆ, ಭಾಷೆ ಪ್ರೌಢವಾದ ಪ್ರಾಚೀನ ಪರಂಪರೆಯ ಅನುಕರಣವನ್ನು ಪಡೆದಿದೆ. ಈ ಕವಿಗಳ ಜೊತೆಯಲ್ಲಿಯೇ ವಿ.ಸೀತಾರಾಮಯ್ಯನವರ ಹೆಸರನ್ನೂ ಸೇರಿಸಬಹುದು. ಸಂದೇಹ, ಪ್ರಶ್ನೆ, ಪರೀಕ್ಷೆ ಇತ್ಯಾದಿಗಳು ಇನ್ನುಳಿದ ಹಿರಿಯ ಕವಿಗಳಲ್ಲಿ ಕಾಣದ, ಇವರದೇ ಆದ ವೈಶಿಷ್ಟ್ಯ. ಇವರ ಭಾಷೆಯೂ ಹೆಚ್ಚು ಆಧುನಿಕವಾದದ್ದು. ಒಟ್ಟಾರೆ ನೋಡಿದಾಗ ಈ ಗುಂಪಿನ ಕವಿಗಳು ಪ್ರಾಚೀನ ಸಂಪ್ರದಾಯದಲ್ಲಿ ಬೇರುಬಿಟ್ಟವರಾಗಿಯೂ, ಅಗತ್ಯವಾದಷ್ಟು ಕನಿಷ್ಠ ಮಿತಿಯ ಆಧುನಿಕತೆಯನ್ನು ಒಪ್ಪಿಕೊಳ್ಳುವ ಒತ್ತಾಯಕ್ಕೆ ಒಳಗಾದವರಾಗಿಯೂ ಕಂಡುಬರುತ್ತಾರೆ. ವಿ.ಸೀ. ಯವರು ಈ ಬಗೆಯ ಸಾಮಾನ್ಯೀಕರಣಕ್ಕೆ ಹೊರತಾಗಿರಬಹುದು. ಪ್ರಾಚೀನ ಪ್ರೌಢ ಸಂಪ್ರದಾಯವನ್ನು ಆರಿಸಿಕೊಂಡು ಆಧುನಿಕವಾಗಿ ತೋರಿದ ಇನ್ನೊಬ್ಬ ಕವಿಯ ಬಗ್ಗೆ ಒಂದೆರಡು ಮಾತು ಹೇಳಿ ಈ ಭಾಗವನ್ನು ಮುಕ್ತಾಯಗೊಳಿಸಬಹುದು. ಅವರೆಂದರೆ ಕಡೆಂಗೋಡ್ಲು ಶಂಕರಭಟ್ಟರು. ಅವರೂ ದೀರ್ಘವಾದ ಕಥನ ಕವನಗಳನ್ನು ಬರೆದಿದ್ದರೂ ಭಾವಗೀತೆಯ ನೈಸರ್ಗಿಕ ಗುಣ ಅವರ ಕಾವ್ಯದಲ್ಲಿ ಸಾಕಷ್ಟಿದೆ. ಮಾರ್ಗ ಮತ್ತು ದೇಸಿಯ ಸುಂದರ ಸಮನ್ವಯವನ್ನು ಇವರ ಶೈಲಿ ಸಾಧಿಸಿದೆ.

ಮೈಸೂರು ಪ್ರದೇಶದ ನವೋದಯ ಕವಿಗಳಲ್ಲಿ ಅತ್ಯಂತ ಪ್ರಮುಖರೆನಿಸಿದವರು ಕೆ.ವಿ. ಪುಟ್ಟಪ್ಪನವರು ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಸಾಮಾನ್ಯವಾಗಿ ಪ್ರಕೃತಿ ಕವಿಯೆಂದೇ ಅವರು ಹೆಚ್ಚು ಜನಪ್ರಿಯರಾಗಿದ್ದಾರೆ. ಪ್ರಕೃತಿಯ ಮೂಲಕ ಅದರ ಭವ್ಯತೆಯಲ್ಲಿ ಮೈದೋರಿರುವಂತೆ ಅವರು ಭಗವಂತನನ್ನು ಕಾಣುತ್ತಾರೆ. ಈ ಅವರ ಯೋಗ್ಯತಾವಿಶೇಷವನ್ನು ನಾವು ಮೊದಲು ಮನಗಾಣಬೇಕು. ನಿಸರ್ಗದೊಡನೆ ಅವರ ಸಂಬಂಧ ವಾಸ್ತವಿಕತೆಗಿಂತ ಹೆಚ್ಚಾಗಿ ಆದರ್ಶಪರವಾದದ್ದು. 'ದೇವರು ರುಜು ಮಾಡಿದನು' ಎಂಬ ಅವರ ಪದ್ಯ ಇದಕ್ಕೆ ತಕ್ಕ ನಿದರ್ಶನವಾಗಿದೆ. ಹಳ್ಳಿಗಾಡಿನ ಜೀವನವನ್ನು ತಮ್ಮ ಕಾವ್ಯದಲ್ಲಿ ಚಿತ್ರಿಸುವ ಅವರು ತಮ್ಮ ಮೊದಮೊದಲಿನ ರಚನೆಗಳಲ್ಲಿ ಯಂತ್ರಗಳ ಹಾಗೂ ಯಾಂತ್ರಿಕವಾದ ನಾಗರಿಕ ಜೀವನದ ಕಡೆಗೆ ಬೆನ್ನು ತಿರುಗಿಸಿರುವುದು

ಕಂಡುಬರುತ್ತದೆ. 'ರೈಲ್ ರಸ್ತೆ'ಯನ್ನು ಕುರಿತ ಅವರ ಒಂದು ಪದ್ಯದಲ್ಲಿ ಈ ಮಾತು ಬರುತ್ತದೆ:

ಸದ್ದು ಸತ್ತಿತು; ಕಣ್ಣು ಮರೆಯಾಯ್ತು ರೈಲು;
ಪ್ರಜ್ಞೆ ತಪ್ಪಿದೆ ಮತ್ತೆ ಬಿಸಿಲಿನಲಿ ಬೈಲು !
ಏನೊಂದು ಕ್ಷಣಕಾಲದಲ್ಲಿ ಮಿಂಚಿ ಮರೆಯಾಯ್ತು;
ಬಯಲ ನಿದ್ದೆಯು ಕಂಡ ಕೆಟ್ಟ ಕನಸಾಯ್ತು !
ಹಾ ! ಕತ್ತರಿಸಿದೊಂದು ನರವೆ ಸಾಕು
ನೆತ್ತರವ ಶೋಷಿಸಲು ! ಇನ್ನೇನು ಬೇಕು?

ಪುಟ್ಟಪ್ಪನವರ ಭಾಷೆ ಆಡುಮಾತಿನ ಇಲ್ಲವೆ ಜಾನಪದ ನುಡಿಯ ಪ್ರಭಾವಕ್ಕೆ ಒಳಗಾದುದಲ್ಲ ಎಂಬುದು ಸ್ಪಷ್ಟವಾಗಿದೆ. ಇದು ಹೆಚ್ಚು ಪಾಂಡಿತ್ಯಪೂರ್ಣವಾಗಿದ್ದು ಬುದ್ಧಿಪೂರ್ವಕ ಕಾವ್ಯಕಲೆಯಿಂದ ಕೂಡಿದೆ. ಈ ದಿಸೆಯಲ್ಲಿ ಪುಟ್ಟಪ್ಪನವರು ಬೇಂದ್ರೆಯವರಿಂದ ತೀರ ಭಿನ್ನವಾಗಿ ಕಂಡುಬರುತ್ತಾರೆ. ಅವರ ಗಂಭೀರ ಶೈಲಿ ಭಾವಗೀತೆಗಿಂತ ಮಹಾಕಾವ್ಯಕ್ಕೆ ಹೆಚ್ಚು ಹೊಂದಿಕೊಳ್ಳುತ್ತದೆಂಬುದನ್ನು ಯಾರೂ ಅರಿಯಬಹುದು. ಆಧುನಿಕ ಯುಗದಲ್ಲಿ ಮಹಾಕಾವ್ಯದ ಎಡೆಗೆ ತುಯ್ಯುವ ನಿರಂತರ ಪ್ರಯತ್ನ ಅವರದೇ ಆದ 'ಶ್ರೀ ರಾಮಾಯಣ ದರ್ಶನಂ' ಆಗಿರುವುದು ಆಕಸ್ಮಿಕವೇನೂ ಅಲ್ಲ. ತಮ್ಮ ಕಾವ್ಯ ಜೀವನದ ಪ್ರಾರಂಭದಲ್ಲಿ ಅವರು ರಾಷ್ಟ್ರೀಯ ಭಾವನೆಯಿಂದ ಆಕರ್ಷಿತರಾದಂತೆ ಕಂಡುಬಂದರೂ ಆ ಮೇಲಿನ ಅವರ ಕಾವ್ಯ ಹೆಚ್ಚಾಗಿ ಆಧಿದೈವಿಕ ಹಾಗೂ ಆಧ್ಯಾತ್ಮಿಕದತ್ತ ವಾಲಿದೆ. ಶ್ರೀ ರಾಮಕೃಷ್ಣ ಪರಮಹಂಸರ ಆಧ್ಯಾತ್ಮಿಕ ಪ್ರಭಾವ ಮಾತ್ರ ಅವರ ಕಾವ್ಯ ಜೀವನದುದ್ದಕ್ಕೂ ಗೋಚರಿಸುತ್ತದೆ. ಜೊತೆಯಲ್ಲಿಯೇ ಪುಟ್ಟಪ್ಪನವರು ನಮ್ಮ ಸಾಮಾಜಿಕ ಪದ್ಧತಿಯ ದೋಷಗಳ ವೈಚಾರಿಕ ವಿಮರ್ಶಕರೆಂಬ ಘನತೆಯನ್ನೂ ಪಡೆದಿದ್ದಾರೆ. ಗಾತ್ರ ಹಾಗೂ ಗುಣಗಳೆರಡರಲ್ಲೂ ಅವರ ಕಾವ್ಯ ಆಧುನಿಕ ಕಾಲದ ಒಂದು ಮಹಾಸಾಧನೆಯೆಂದೇ ಹೇಳಬಹುದು. ಆಧುನಿಕ ಸಮಸ್ಯೆಗಳನ್ನು, ವಸ್ತುಗಳನ್ನು ಅದು ಮಹಾಕಾವ್ಯದ ರೀತಿಯಲ್ಲಿಯೇ ಅನ್ವೇಷಿಸುತ್ತದೆ. ತಂತ್ರದ ದೃಷ್ಟಿಯಿಂದ ನೋಡಿದಾಗಲೂ ಸರಳ ರಗಳೆಯ ಮಾರ್ಪಡಿಸಿದ ರೂಪದಲ್ಲಿ ಈ ಕಾವ್ಯ ಒಂದು ಯಶಸ್ವೀ ಪ್ರಯತ್ನವಾಗಿದೆ.

ಮೈಸೂರು ಭಾಗದ ಕವಿಗಳಲ್ಲಿ ತುಂಬ ಮೆಚ್ಚುಗೆಗೆ ಪಾತ್ರರಾದ ಜಿ.ಪಿ. ರಾಜರತ್ನಂ ಎಂಡ್ಕುಡುಕ ರತ್ನ ಎಂದು ಹೆಸರಾದವರು. ಕುಡುಕರ ಜೀವನ ಹಾಗೂ ಅವರ ವಿಚಾರಗಳ ಸುತ್ತ ಜೀವಂತವಾಗಿ ಹೆಣೆದ ಪದ್ಯಗಳಲ್ಲಿ ಕವಿಯೇ ಕಾಣಿಸಿಕೊಳ್ಳುತ್ತಾರೆ. ಈ ಪದ್ಯಗಳು ಮೊದಲು ಪ್ರಕಟಗೊಂಡಾಗಲೇ ಕನ್ನಡ ಜನತೆ ಅದಕ್ಕೆ ಮಾರುಹೋಯಿತು. ಕುಡುಕರು ಆಡುವ ವಿಶಿಷ್ಟ ಭಾಷೆಯ ಪ್ರಯೋಗದಿಂದಾಗಿ ಇದು ಇನ್ನೊಂದು ರೀತಿಯಲ್ಲಿ ಕಾವ್ಯವನ್ನು ಆಡುಭಾಷೆಗೆ ಹತ್ತಿರ ತರುವ ಮತ್ತೊಂದು ಪ್ರಯತ್ನವೆನ್ನಬಹುದು. ಆದರೆ

ಈ ಬಗೆಯ ಪದ್ಯಗಳು ತಮ್ಮವೇ ಆದ ರೀತಿಯಲ್ಲಿ ಕುತೂಹಲಕಾರಿಯಾಗಿದ್ದು ಎಲ್ಲೋ ಒಬ್ಬರು ಮಾಡಬಲ್ಲ ವಿಶಿಷ್ಟ ಸಾಧನೆಯೆನಿಸುತ್ತವೆ. ಈಗ ಪು.ತಿ. ನರಸಿಂಹಾಚಾರ್ ಅವರ ಸಂಪ್ರದಾಯನಿಷ್ಠ ಹಾಗೂ ಭಕ್ತಿಯುತವಾದ ಕಾವ್ಯದತ್ತ ಹೊರಳಬಹುದು. ಸಂಗೀತ ಹಾಗೂ ಕಾವ್ಯಶಕ್ತಿಯ ಅವರ ವಿಶೇಷ ಗುಣಗಳು ಅವರ ಗೀತನಾಟಕಗಳಲ್ಲಿ ಯಶಸ್ವಿಯಾಗಿ ಸಮನ್ವಯಗೊಂಡಿವೆ. ಅವರದು ಒಂದು ಬಗೆಯ ಚಿಂತನಪರ ಕಾವ್ಯ. ಇಂಥ ಕಾವ್ಯ, ಚೋದಿಸುವ ಮನೋಭಾವದ್ದಲ್ಲವಾದರೂ ತನ್ನದೇ ಆದ ರೀತಿಯಲ್ಲಿ ಆಧ್ಯಾತ್ಮಿಕ ಸಮಾಧಾನವನ್ನು ಮನಸ್ಸಿಗೆ ನೀಡಬಲ್ಲುದು.

ಕೆ.ಎಸ್. ನರಸಿಂಹಸ್ವಾಮಿಯವರ ಮೊದಲ ಕವನ ಸಂಕಲನ 'ಮೈಸೂರು ಮಲ್ಲಿಗೆ' ಪ್ರಕಟಗೊಂಡಾಗಲೇ ವಾಚಕ ಪ್ರಪಂಚವನ್ನೂ ವಿಮರ್ಶಕರನ್ನೂ ಕೂಡಿಯೆ ಅದು ಸೆರೆಹಿಡಿಯಿತು. ಅವರ ಕಾವ್ಯಶಕ್ತಿ ಉನ್ನತಮಟ್ಟದ್ದಾದರೂ ಅದಕ್ಕೆ ತನ್ನದೇ ಆದ ಮಿತಿಗಳಿವೆ. ಅವರ ಪದ್ಯಗಳ ಮೇಲೆ, ಹಾಗೆಯೆ ಅವರ ಭಾಷೆಯ ಮೇಲೆ ನಗರದಲ್ಲಿ ವಾಸಿಸುವ ಸಾಮಾನ್ಯ ಜನ ಆಡುವ ಮಾತಿನ ಲಯದ ಪ್ರಭಾವವನ್ನು ಗುರುತಿಸಬಹುದು. ಅವರ ಮೊದಮೊದಲಿನ ಕಾವ್ಯದ ಪ್ರಮುಖ ವಸ್ತು ವಿಶಿಷ್ಟವಾಗಿ ಭಾರತೀಯವೆನಿಸುವಂಥ ಪ್ರಣಯ. ಯಾಕೆಂದರೆ ಅದು ನಮ್ಮ ಆಧುನಿಕ ಮಧ್ಯಮವರ್ಗದ ಜೀವನದಲ್ಲಿ ಕಂಡುಬರುವ ವಿವಾಹಿತ ಗಂಡು ಹೆಣ್ಣುಗಳಲ್ಲಿ ವಿಕಾಸಗೊಳ್ಳಬಹುದಾದ ಪ್ರೇಮವನ್ನೆ ಹೆಚ್ಚಾಗಿ ಚಿತ್ರಿಸುತ್ತದೆ. ಬರ್ನ್ಸ್ ಕವಿಯೊಡನೆ ಅವರನ್ನು ಹೋಲಿಸುವುದುಂಟು. ಆದರೆ ನರಸಿಂಹಸ್ವಾಮಿಯವರ ಕಾವ್ಯದಲ್ಲಿ ಚಿತ್ರಣಗೊಂಡ, ಮೈತುಂಬ ಎಚ್ಚರವುಳ್ಳ ಮಧ್ಯಮವರ್ಗದವರ ಪ್ರೇಮಕ್ಕೂ, ಕಾಮಾತುರ, ಅತಿರಂಜಿತ ಹಾಗೂ ನೀತಿಬಾಹಿರ ಸ್ಕಾಟ್ ಕವಿಯ ಭಾವೋದ್ರೇಕಕ್ಕೂ ತುಂಬ ಅಂತರವಿದೆ. ನರಸಿಂಹಸ್ವಾಮಿಯವರು ತಮ್ಮ ಇತ್ತೀಚಿನ ಕವಿತೆಗಳಲ್ಲಿ 'ನವ್ಯಕಾವ್ಯ' ಶೈಲಿಯ ಕಡೆಗೆ ತಮ್ಮ ಒಲವನ್ನು ತೋರಿಸಿರುವುದು ಸ್ಪಷ್ಟವಾಗಿದೆ. 'ಕುಂಕುಮ ಭೂಮಿ'ಯಂಥ ಅವರ ಈಚಿನ ಕವಿತೆಗಳು ಅವರ ಮೊದಲ ಹಾಗೂ ಈಗಿನ ಶೈಲಿಗಳ ನಡುವಣ ಹೋರಾಟವನ್ನು ನಿಚ್ಚಳವಾಗಿ ತೋರಿಸುತ್ತವೆ. ಅವರ ಕಾವ್ಯ ಪ್ರತಿಮೆ ಹಾಗೂ ಭಾಷೆ ಪ್ರಭಾವಶಾಲಿಯಾಗಿ ತೋರಿದರೂ ಕವಿಯ ನಿಲುಗಡೆಯ ಹೊಯ್ದಾಟದಿಂದಾಗಿ ಒಂದು ಬಗೆಯ ಅಸ್ಪಷ್ಟತೆ ತಲೆದೋರುತ್ತವೆ. ಈ ಅಸ್ಪಷ್ಟತೆಗೆ ಯಾವಾಗಲೂ ಇದೇ ಕಾರಣವೆಂದೇನೂ ಅಲ್ಲ. ಈಗ ಕಂಡುಬರುವ ಒಳಬಗೆಯ ಬಿಕ್ಕಟ್ಟಿನಿಂದ ನರಸಿಂಹಸ್ವಾಮಿಯವರ ಕಾವ್ಯ ಒಂದು ಹೊಸ ಬಲವನ್ನು ಸಂಪಾದಿಸಿ ಹೊರಬರುವ ಪ್ರಯತ್ನದಲ್ಲಿರಬಹುದು. ಅದೇನೇ ಇದ್ದರೂ ಅವರು ನಮ್ಮ ಮಹತ್ವ ಪೂರ್ಣ ಕವಿಗಳಲ್ಲಿ ಒಬ್ಬರೆಂಬುದು ನಿಸ್ಸಂದೇಹ.

೩

ಆಧುನಿಕ ಕನ್ನಡ ಕಾವ್ಯದ ಎರಡು ಮುಖ್ಯ ಮಜಲುಗಳಾದ 'ನವೋದಯ' ಹಾಗೂ -'ನವ್ಯಕಾವ್ಯ'ದ ನಡುವಿನ ಸಂಕ್ರಮಣಾವಸ್ಥೆಯಲ್ಲಿ ಸ್ವಲ್ಪ ಕಾಲ 'ಪ್ರಗತಿಶೀಲ'ವೆಂದು

ಕರೆಯಲ್ಪಡುವ ಕಾವ್ಯ ಕಾಣಿಸಿಕೊಂಡಿತು. ಶಿವರುದ್ರಪ್ಪನವರು ಸೂಚಿಸಿದಂತೆ ಇದರ ಕಾಲಕ್ರಮ ಹೀಗಿದೆ: ೧೯೨೦ ರಿಂದ ೧೯೪೦-೪೫ 'ನವೋದಯ'; ೧೯೪೦-೪೫ ರಿಂದ ೧೯೫೦ 'ಪ್ರಗತಿಶೀಲ'; ೧೯೫೦ ರಿಂದ 'ನವ್ಯಕಾವ್ಯ'. ಕಾಲಾನುಕ್ರಮಣಿಕೆಯಲ್ಲಿ ಇವು ಒಂದರ ಮೇಲೊಂದು ವ್ಯಾಪಿಸಿರುವುದು ಮೇಲೆಯೇ ಕಾಣಿಸುತ್ತದೆ. ಕುರ್ತಕೋಟಿಯವರು ಎತ್ತಿ ತೋರಿಸಿರುವಂತೆ 'ಪ್ರಗತಿಶೀಲ' ಬರವಣಿಗೆ 'ನವೋದಯ'ದ ಸತ್ವ ತೀರುವ ಮುನ್ನವೇ ಪ್ರಾರಂಭವಾಗಿದ್ದು 'ನವ್ಯಕಾವ್ಯ' ಮಾತ್ರ ಇದ್ದಕ್ಕಿದ್ದ ಹಾಗೆ ತಲೆಯೆತ್ತಿದಂತಿದೆ. 'ನವೋದಯ'ದ ತರುವಾಯದ ಎರಡು ರೀತಿಗಳಾದ ಪ್ರಗತಿಶೀಲ ಹಾಗೂ ನವ್ಯಕಾವ್ಯಗಳೂ ಪಾಶ್ಚಾತ್ಯ ಸಾಹಿತ್ಯದಿಂದ ಸ್ಫೂರ್ತಿ ಪಡೆದವುಗಳೇ. ಪಾಶ್ಚಾತ್ಯರ ಬರೆವಣಿಗೆಯಲ್ಲಿ 'ಪ್ರಗತಿಶೀಲ' ಎಂಬ ಪದ ವಿಶಿಷ್ಟವಾದ ರಾಜಕೀಯ ಬಣ್ಣವನ್ನು ಹೊಂದಿದ್ದು, ಮಾರ್ಕ್ಸ್‌ವಾದದ ಪ್ರಭಾವವನ್ನು ಸೂಚಿಸುತ್ತದೆ. ಇದರ ಪರಿಣಾಮವಾಗಿ ಸಾಮಾಜಿಕ ಸಂಗತಿಗಳ ಬಗೆಗೆ ತೀಕ್ಷ್ಣವಾದ ಅರಿವು ಮತ್ತು ರಾಜಕೀಯ ಸಿದ್ಧಾಂತ ಕಾವ್ಯದಲ್ಲಿ ಇಳಿದುಬರುವ ಒಲವು ಕಂಡುಬಂದವು. ಈ ಚಳವಳಿ, ಸಾಹಿತ್ಯದಲ್ಲಿ ವಾಸ್ತವಿಕತೆ/ ಯಥಾರ್ಥತೆ. ಶೀಲ-ಅಶ್ಲೀಲಗಳ ಮಡಿ-ಮೈಲಿಗೆಯನ್ನು ತೊಡೆದು ನಿರ್ಭಯವಾಗಿ ಏನನ್ನು ಬೇಕಾದರೂ ಸಾಹಿತಿಯಾದವನು ಬರೆಯಬೇಕೆನ್ನುವ ಪ್ರವೃತ್ತಿ -ಇತ್ಯಾದಿಗಳನ್ನು ತಂದಿತೆಂದು ಶಿವರುದ್ರಪ್ಪನವರು ಅಭಿಪ್ರಾಯಪಡುತ್ತಾರೆ. ಪ್ರಗತಿಶೀಲ ಚಳುವಳಿಯ ಪ್ರಭಾವ ಕನ್ನಡ ಕಾವ್ಯಕ್ಕಿಂತ ವಿಶೇಷವಾಗಿ ಕಥೆ-ಕಾದಂಬರಿಗಳ ಮೇಲೆಯೇ. ಪುಟ್ಟಪ್ಪನವರು ಕೂಡ ಈ ಸಮಯದಲ್ಲಿಯೇ 'ಕೋಗಿಲೆ ಮತ್ತು ಸೋವಿಯೆಟ್ ರಷ್ಯಾ' (೧೯೪೪) ಪ್ರಕಟಿಸಿದುದು; ಇಲ್ಲಿಯ ಎಲ್ಲ ಕವಿತೆಗಳಲ್ಲಿಯೂ ಈ ಪ್ರಗತಿಶೀಲ ಮನೋಧರ್ಮವನ್ನು ಕಾಣಬಹುದು. ಅ.ನ. ಕೃಷ್ಣರಾಯರು ಸಂಪಾದಿಸಿದ 'ರಸಋಷಿ' (೧೯೪೫) ಪ್ರಗತಿಶೀಲ ಕವಿಗಳ ಕೆಲವು ಕವನಗಳನ್ನು ಒಳಗೊಂಡಿದೆ. ಗೋಕಾಕರು ತಮ್ಮ 'ಅಭ್ಯುದಯ'(೧೯೪೬) ದಲ್ಲಿ ಈ ಕರೆಗೆ ಓಗೊಟ್ಟಿದ್ದಾರೆ. ಅದರಲ್ಲಿ ಅವರು:

ಹೋಗಿಬರುವೆನು ನನ್ನ ಎಳಗನಸುಗಳೆ
ನಿಮ್ಮ ತಳಿರ್ಗೆಂಪು ಹೂಗಂಪು ತಂಗಾಳಿ ಮುಗಿದು
ಸಮರವನು ಸಾರಿಹುದು ಅಮರಶಕ್ತಿಯದೊಂದು

ಎಂದಿದ್ದಾರೆ. ಗೋಪಾಲಕೃಷ್ಣ ಅಡಿಗರ 'ಕಟ್ಟುವೆವು ನಾವು' ಕೈಗೂಡದ ಈ ಚಳುವಳಿಯ ಆಕರ್ಷಣೆಗೆ ಒಳಗಾದ ಮತ್ತೊಂದು ಪ್ರಯತ್ನವೆನ್ನಬಹುದು. ಹೀಗೆ ಈ ಚಳುವಳಿಗೆ ಅದರದೇ ಪ್ರತ್ಯೇಕತೆ ಇರದಿದ್ದರೂ ತುಂಬ ಮಹತ್ವದ್ದಾದ 'ನವ್ಯಕಾವ್ಯ'ಕ್ಕೆ ಹಿನ್ನೆಲೆಯಾದ ಅವಸ್ಥಾಂತರವೆಂದು ಇದನ್ನು ಕರೆಯುವುದು ಹೆಚ್ಚು ಸೂಕ್ತವಾದೀತು.

೪

'ನವ್ಯಕಾವ್ಯ' ಸಹಜವಾಗಿಯೇ ತೀವ್ರವಾದ ವಾದವಿವಾದಗಳನ್ನು ಎಬ್ಬಿಸಿತು. ಎರಡು ದಶಕಕ್ಕೂ ಮಿಕ್ಕಿ ಈ ಕಾವ್ಯ ನಡೆದುಬಂದಿದ್ದರೂ ನಾವಿನ್ನೂ ಅದಕ್ಕೆ ತೀರ

ಸಮೀಪವಾಗಿರುವುದರಿಂದ ಆ ಬಗ್ಗೆ ನಿಶ್ಚಿತವಾದ ತತ್ವ ಕಟ್ಟುವದಕ್ಕಾಗದು. ಅದರ ಲಕ್ಷಣಗಳನ್ನು ಪ್ರತಿಪಾದಿಸಿದವರಲ್ಲಿ ಅಲ್ಲದೆ ಅದಕ್ಕೆ ನಾಮಕರಣ ಮಾಡುವಲ್ಲಿ ಗೋಕಾಕರು ಮೊದಲಿಗರಾದರೂ 'ನವ್ಯಕಾವ್ಯ' ತನ್ನ ಪ್ರಾರಂಭದ ಹಂತದಲ್ಲಿ ಗೋಪಾಲಕೃಷ್ಣ ಅಡಿಗ ಹಾಗೂ ರಾಮಚಂದ್ರ ಶರ್ಮ ಈ ಇಬ್ಬರು ಕವಿಗಳಿಂದ ಬಲಗೊಂಡು ಮುಂದುವರಿಯಿತು. ನವ್ಯಕಾವ್ಯ ಜನ್ಮ ಪಡೆದದ್ದೂ ಅಧಿಕೃತವಾಗಿ ೧೯೫೦ರಲ್ಲಿ. ಆ ವರ್ಷ ನಡೆದ ಮುಂಬೈ ಕನ್ನಡ ಸಾಹಿತ್ಯ ಸಮ್ಮೇಳನದ ತಮ್ಮ ಮಹತ್ವದ ಭಾಷಣದಲ್ಲಿ ಗೋಕಾಕರು ಅದರ ಬರವನ್ನು ಸಾಕಷ್ಟು ಉತ್ಸಾಹದಿಂದಲೇ ಸಾರಿದರು. ಅದಕ್ಕೆ ಮುಖ್ಯ ಪ್ರೇರಣೆ ಟಿ.ಎಸ್. ಇಲಿಯಟ್‌ನ 'ದಿ ವೇಸ್ಟ್ ಲ್ಯಾಂಡ' ಕಾವ್ಯ. ಆಡೆನ್ ಮತ್ತು ಡಿಲಾನ್ ಥಾಮಸ್‌ರ ಪ್ರಭಾವವನ್ನೂ ಅದರಲ್ಲಿ ಗುರುತಿಸಬಹುದು. ಉದಾಹರಣೆಗೆ, ಅಡಿಗ ಹಾಗೂ ರಾಮಚಂದ್ರ ಶರ್ಮರ ಕಾವ್ಯದಲ್ಲಿ ಥಾಮಸ್‌ನ ಪದ್ಯಗಳ ಹಿಂಸೆ ಹಾಗೂ ಅವ್ಯವಸ್ಥಾ ಸ್ಥಿತಿಯನ್ನು ಎದುರುಗೊಳ್ಳುತ್ತೇವೆ. ನವ್ಯದ ಕವಿಗಳು ಅನುಭವಿಸಿದ ನಿರಾಶೆ, ತಿರಸ್ಕಾರ ಹಾಗೂ ವೈಫಲ್ಯ ಇತ್ಯಾದಿಗಳನ್ನು ಜಿ.ಎಸ್. ಶಿವರುದ್ರಪ್ಪನವರು ಖಂಡಿಸಿದ್ದಾರೆ. ಭಾರತೀಯ ಸಂದರ್ಭದಲ್ಲಿ ಈ ಬಗೆಯ ಮನೋಧರ್ಮಕ್ಕೆ ಅರ್ಥವೇ ಇಲ್ಲ ಇಂಗ್ಲೆಂಡದಲ್ಲಿ ಎರಡು ಮಹಾಯುದ್ಧಗಳ ಆಘಾತದಲ್ಲಿ ಈ ಕಾವ್ಯ ಹುಟ್ಟಿದ್ದು ಸಮರ್ಥನೀಯ ಎಂಬುದು ಅವರ ವಾದ. ಆಗತಾನೇ ಸ್ವಾತಂತ್ರ್ಯವನ್ನು ಪಡೆದ ನಮ್ಮ ನಾಡಿನ ಎಚ್ಚೆತ್ತ ಮನೋಧರ್ಮಕ್ಕೆ ಈ ನಿರಾಶೆ ತೀರ ವ್ಯತಿರಿಕ್ತವಾದದ್ದೆಂಬುದನ್ನು ಅವರು ಎತ್ತಿ ಹೇಳಿದ್ದಾರೆ. ಆದರೆ ಇನ್ನೊಬ್ಬ ವಿಮರ್ಶಕರಾದ ಶಾಂತಿನಾಥ ದೇಸಾಯಿಯವರ ಈ ಆರೋಪ ತರವಲ್ಲವೆಂದು ತಮ್ಮ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಿದ್ದಾರೆ. ಯಾಕೆಂದರೆ, ಅಡಿಗರಂಥ ಕವಿಗಳ ಪ್ರತಿಕ್ರಿಯೆ ಯಾವುದೊಂದು ರಾಜಕೀಯ ಸಂಬಂಧದ್ದಾಗಿರದೆ, ಭಾರತೀಯ ಸಮಾಜದ ಆಳವಾದ ಸಾಂಸ್ಕೃತಿಕ ದುರವಸ್ಥೆಗೆ ಎದ್ದ ಪ್ರತಿಭಟನೆಯಾಗಿದ್ದಿತು. ಈ ವಾದವಿವಾದ ಒತ್ತಟ್ಟಿಗಿರಲಿ, ಶಿವರುದ್ರಪ್ಪನವರೂ ಕೂಡ ಈ ಬಗೆಯ ಮನೋಭಾವದ ಆರೋಗ್ಯಕರ ಕೊಡುಗೆಯನ್ನು ಒಪ್ಪಿಕೊಂಡಿದ್ದಾರೆ. ಆದರೆ ನಮ್ಮ ಪ್ರಾಚೀನ ಪರಂಪರೆಯನ್ನು ಅನಗತ್ಯವಾಗಿ ಈ ನವ್ಯಕವಿಗಳು ನಿರಾಕರಿಸುವುದನ್ನು ಅವರು ಪ್ರತಿಭಟಿಸಿದ್ದಾರೆ. ಹೊಸ ಹಾದಿಯನ್ನು ಹುಡುಕುತ್ತಿರುವಾಗ ನವೋದಯದ ಕವಿಗಳು ಗತಕಾಲದ ಘನವಾದ ಸಾಹಿತ್ಯಿಕ ಸಂಪ್ರದಾಯದಲ್ಲಿ ಯುಕ್ತಾಯುಕ್ತ ಪರಿಜ್ಞಾನದಿಂದ ತಮ್ಮಷ್ಟಕ್ಕೆ ಗಟ್ಟಿಯಾಗಿ ಕಾಲೂರಿ ನಿಲ್ಲುವಂತೆ ನೋಡಿಕೊಂಡಿದ್ದರು. ಬಹುಶಃ ಈ ಆರೋಪ ನವ್ಯಕವಿಗಳ ಕಾವ್ಯಕ್ಕಿಂತ ಅವರ ತಾತ್ವಿಕ ಹೇಳಿಕೆಗಳಿಗೆ ಹೆಚ್ಚು ಸಂಬಂಧಪಟ್ಟುದಾಗಿದೆ. ಅಡಿಗ ಹಾಗೂ ಶರ್ಮರು ಕೆಲವೊಮ್ಮೆ ಪ್ರಾಚೀನ ಕಾವ್ಯಗಳ ಭಾಷಾ ಸರಣಿಯನ್ನು ಅಣಕವಾಡಿದಂತೆ ಭಾಷೆಯನ್ನು ಬಳಸುವರಲ್ಲದೆ ಸಾಂಪ್ರದಾಯಿಕವಾದ ಪೌರಾಣಿಕ ಪ್ರತಿಮೆಗಳನ್ನೂ ಅವರು ಕೆಲಮಟ್ಟಿಗೆ ಉಪಯೋಗಿಸುತ್ತಾರೆ. ಹೀಗಿದ್ದರೂ ಅವರ ಇತ್ತೀಚಿನ ಕಾವ್ಯವನ್ನು ಸುಲಭವಾಗಿ ಅಲ್ಲಗಳೆಯುವುದು ಸಾಧ್ಯವಿಲ್ಲ. ಶಿವರುದ್ರಪ್ಪನವರಂಥ ಕವಿಗಳೂ ಅವರ

ಕಾವ್ಯದ ಪರಿಣಾಮಕ್ಕೆ ಒಳಗಾಗಿ ತಮ್ಮ ಕಾವ್ಯವನ್ನು ಕೆಲಮಟ್ಟಿಗೆ ಮಾರ್ಪಡಿಸಿಕೊಂಡಿರುವುದು ನವ್ಯಕಾವ್ಯಕ್ಕೆ ಅವರು ತೋರಿದ ಗೌರವವೆನ್ನಬಹುದು.

ನವ್ಯಕಾವ್ಯ ಈಗೊಂದು ನಿಲುಗಡೆಗೆ ಬಂದಿದ್ದು ಬರೀ ಒಂದು ಅನುಕರಣೆಯಾಗಿ ಉಳಿದುಕೊಂಡಿದೆ. ಈಗ ಬರೆಯುತ್ತಿರುವ ಹೊಸ ಕವಿಗಳಲ್ಲಿ ಕೆಲವರು ನವ್ಯಕಾವ್ಯದ ಸಾರಶಕ್ತಿಯನ್ನು ಅಳವಡಿಸಿಕೊಂಡರೂ ಅದರ ಅತಿಯಾದ ಅನುಸರಣೆಗೆ ಒಳಗಾಗದಿರುವುದು ಒಂದು ಸುದೈವ. ಭಾವಕ್ಕಿಂತ ಹೆಚ್ಚು ಬುದ್ಧಿ ಪ್ರಧಾನವಾದ ಈ ಕಾವ್ಯ ಸಾಮಾಜಿಕ ಸಮಸ್ಯೆಗಳ ಬಗ್ಗೆ ತನ್ನ ವ್ಯಕ್ತಿತ್ವವನ್ನು ಮರೆಯಲಾಗದ ರೀತಿಯಲ್ಲಿ ಕ್ಲೇಶಕ್ಕೊಳಗಾಗಿಸಿದೆ. ಅದರ ಪ್ರಮುಖ ಅಂಶಗಳನ್ನು ಪ್ರತ್ಯೇಕಿಸಿ ಕುರ್ತಕೋಟಿಯವರು ಗೋಕಾಕರ ಪ್ರತಿಪಾದನೆಯನ್ನು ಉದಾಹರಿಸಿದ್ದಾರೆ: "....... ಅಂತರ್ ದೃಷ್ಟಿಯೇ ಕಾವ್ಯದ ಆತ್ಮ. ವ್ಯಕ್ತಿನಿಷ್ಠವಾಗಿ ಅದು ನಿರೂಪಿತವಾಗಿದ್ದರೆ ಕಾವ್ಯವು ರೋಮ್ಯಾಂಟಿಕ್ ಮಾದರಿಯಾಗುತ್ತದೆ; ವಸ್ತುನಿಷ್ಠವಾಗಿ ನಿರಾಭರಣವಾಗಿ, ನೇರವಾಗಿ ಅದು ವ್ಯಕ್ತವಾಗಿದ್ದರೆ ಕಾವ್ಯವು ನವ್ಯವಾಗುತ್ತದೆ". ಇದನ್ನು ನೋಡಿದರೆ ಅದು ಇಂಗ್ಲಿಷ್ 'ಪ್ರತಿಮಾನಿಷ್ಠ'. ಕಾವ್ಯಕ್ಕೆ ಸಮೀಪವಾಗಿದೆಯೇನೋ ಎಂಬಂತೆ ಕಂಡುಬರುತ್ತದೆ. ನವ್ಯ ಕಾವ್ಯದ ಸ್ವರೂಪವನ್ನು ನಿಶ್ಚಿತಗೊಳಿಸಲು ಪ್ರಯತ್ನಿಸುವ ಈಚಿನ ಒಂದು ಲೇಖನದಲ್ಲಿ ಶಾಂತಿನಾಥ ದೇಸಾಯಿಯವರು ಈ ಹೊಸ ಮಾರ್ಗ ಚೆನ್ನಾಗಿ ಬೇರುಬಿಟ್ಟಿದೆಯೆಂಬುದನ್ನು ಸಾಧಿಸಿದ್ದಾರೆ. ತೀರ ಇತ್ತೀಚಿನ ವರೆಗೂ ಸಾಮಾನ್ಯವಾಗಿ ಪ್ರತಿಯೊಬ್ಬ ಕವಿಯ ಮೇಲೂ ಆಗಿರುವ ಇದರ ಮಹತ್ವದ ಪ್ರಭಾವವನ್ನು ಗಮನಿಸಿದಾಗ ಅವರ ಮಾತು ಸತ್ಯವೆನಿಸುತ್ತದೆ. ಅದನ್ನು ತಳ್ಳಿ ಹಾಕುವ ರೀತಿಯಲ್ಲಿ ತರತಮಗಳಿರಬಹುದು. ಆದರೆ ಯಾವುದೇ ಮಹತ್ವದ ಕವಿ 'ನವ್ಯಕಾವ್ಯ'ದ ಆಹ್ವಾನವನ್ನು ಸಂಪೂರ್ಣವಾಗಿ ಕಡೆಗಣಿಸಲಾರ. ಇದು ಕೇವಲ ಇಂಗ್ಲಿಷ್ ಕಾವ್ಯದ ಪ್ರಭಾವದ ಪರಿಣಾಮ ಎಂದು ತಿಳಿಯುವುದು ತಪ್ಪು ಎನ್ನುತ್ತಾರೆ ಶಾಂತಿನಾಥ ದೇಸಾಯಿಯವರು. ಇಷ್ಟೇ ಅಲ್ಲ, ಇಂಗ್ಲಿಷ್ ಕಾವ್ಯದ ಪ್ರಭಾವವನ್ನು ಅರಗಿಸಿ ತನ್ನದನ್ನಾಗಿ ಮಾಡಿಕೊಳ್ಳುವ ಶಕ್ತಿ ಕನ್ನಡ ಕಾವ್ಯ ಸಂಪ್ರದಾಯದಲ್ಲಿಯೇ ಇರುವುದನ್ನು ಅವರು ಸೂಚಿಸಿದ್ದಾರೆ. ಇದೆಲ್ಲವೂ ಮೆಚ್ಚತಕ್ಕ ಮಾತೇ. ಕನ್ನಡದಲ್ಲಿ ತೀರ ಸ್ವತಂತ್ರವಾದ ಯಾವುದೇ ಪರದೇಶದ ಪ್ರಭಾವಕ್ಕೆ ಸಂಬಂಧವಿಲ್ಲದ ಹೊಸದೊಂದು ಮನೋಧರ್ಮ ವಿ.ಜಿ. ಭಟ್ಟರ ಕಾವ್ಯದಲ್ಲಿ ಕಾಣಿಸಿಕೊಂಡಿರುವುದನ್ನು ದೇಸಾಯಿಯವರು ಉದಾಹರಿಸಿದ್ದಾರೆ. ಕನ್ನಡ ಕಾವ್ಯದಲ್ಲಿ ಕಂಡುಬರುವ 'ನವ್ಯ'ತೆಯ ವಿಶಿಷ್ಟ ಅಂಶಗಳನ್ನು ಅವರು ಹೀಗೆ ಎತ್ತಿ ತೋರಿಸಿದ್ದಾರೆ. ೧). ವಾಸ್ತವಿಕತೆಯನ್ನು ನೇರ ದೃಷ್ಟಿಯಿಂದ ನೋಡುವ ದಾರ್ಷ್ಟ್ಯ; ೨). ಅನುಭವಗಳನ್ನು ಕೆದಕಿ ಕೆದಕಿ ನೋಡುವ ವಿಪರೀತ ಕುತೂಹಲ; ೩). ವೈಯಕ್ತಿಕ ಮೌಲ್ಯಗಳ ಅವಿರತ ಶೋಧನೆ; ೪). ಭಾವನೆಗಳ ಜೊತೆಗೆ ಬುದ್ಧಿಗಿತ್ತ ಪ್ರಾದಾನ್ಯ-ಅಂದರೆ ಕಾವ್ಯದಲ್ಲಿ ಇಡಿಯ ವ್ಯಕ್ತಿತ್ವವನ್ನು ಕೆಲಸಕ್ಕೆ ತರುವ ಹವಣಿಕೆ; ೫). ಅನುಭವ ನಿರೂಪಣೆಯಲ್ಲಿಯ ಪ್ರಾಮಾಣಿಕತೆ; ಹಾಗೂ ೬). ಭಾಷೆಯ ಬಗ್ಗೆ ವೈಶಿಷ್ಟ್ಯ ಪೂರ್ಣವಾದ ಪ್ರಜ್ಞೆ ಹಾಗೂ ಶೈಲಿಯ ಪ್ರಾಯೋಗಿಕತೆ. ನಾವು ಜೀವಿಸುತ್ತಿರುವ

ಪ್ರಪಂಚವನ್ನು ಪ್ರಾಮಾಣಿಕವಾಗಿ ಪ್ರತಿಬಿಂಬಿಸುವ ಕಾವ್ಯವಿದು ಎಂದು ನಂಬಿರುವ ದೇಸಾಯಿಯವರು ಅದನ್ನು ಅತ್ಯಂತ ಉತ್ಸಾಹದಿಂದ ಮೆಚ್ಚಿಕೊಂಡವರೆಂಬುದು ಒಡೆದು ಕಾಣುತ್ತದೆ. ಅವರು ಸೂಚಿಸುವ ಮತ್ತೊಂದು ಮಹತ್ವದ ಅಂಶವೆಂದರೆ- ಕೆ.ಎಸ್. ನರಸಿಂಹಸ್ವಾಮಿ, ಚೆನ್ನವೀರ ಕಣವಿ ಹಾಗೂ ಜಿ.ಎಸ್. ಶಿವರುದ್ರಪ್ಪನವರಂತಹ ಕವಿಗಳು ತಮ್ಮ ನೈಜವಾದ ರಮ್ಯ ದೃಷ್ಟಿಯನ್ನು ವಾಸ್ತವಿಕ ಜಗತ್ತಿನತ್ತ ಹರಿಸಿ ಒಂದು ಹೊಸ ಬಗೆಯ ಸಾರ್ಥಕ ಕಾವ್ಯವನ್ನು ಸೃಷ್ಟಿಸುತ್ತಿರುವುದರ ಕಡೆಗೆ ಓದುಗರ ಗಮನವನ್ನು ಸೆಳೆದಿರುವುದು. ನವ್ಯಕಾವ್ಯ ಜೀವನ ದೊಡನೆ-ಸಮಕಾಲೀನ ಜೀವನದೊಡನೆ- ಕವಿಯ ತೀವ್ರವಾದ ಮಗ್ನತೆಯ ಪರಿಣಾಮವಾಗಿ ದೇಸಾಯಿಯವರಿಗೆ ಕಂಡಿದ್ದರೆ ಕುರ್ತುಕೋಟಿಯವರ ಅಭಿಪ್ರಾಯ ಇದಕ್ಕೆ ತೀರ ವಿರುದ್ಧವಾದುದಾಗಿದೆ: "ನವ್ಯಕಾವ್ಯ ಕನ್ನಡ ಜನಜೀವನದ ಕೇಂದ್ರದಿಂದ ಈಗ ಸರಿಯತೊಡಗಿದೆ. ಅದರ ಉದ್ದೇಶ ಹಾಗೂ ಪ್ರಯೋಜನಗಳು ಕೇವಲ ತಾಂತ್ರಿಕ ಸಿದ್ಧಿಯನ್ನು ಪಡೆಯುವುದಷ್ಟಕ್ಕೇ ಸೀಮಿತವಾಗಿದೆ". ಈ ಆರೋಪ ಒಂದಿಷ್ಟು ಅಸ್ಪಷ್ಟವಾಗಿದೆ. 'ಕನ್ನಡ ಜನಜೀವನದ ಕೇಂದ್ರ' ಎಂಬ ಮಾತು ಸಂದಿಗ್ಧವಾದುದಲ್ಲವೆಂದು, ಅವರು ಮೊದಲೇ ಭಾವಿಸಿರುವಂತೆ ತೋರುತ್ತದೆ. ಇಂದು ಅಂಥ 'ಕೇಂದ್ರ'ವೇ ಇಲ್ಲವೆಂದೂ ಇಲ್ಲವೆ ಅದು ಕುರ್ತಕೋಟಿಯವರು ತಿಳಿದುಕೊಂಡಿರುವಂಥದಲ್ಲವೆಂದೂ ಕವಿಗಳು ಪ್ರತೀಕಾರದ ನುಡಿಯನ್ನಾಡಬಹುದು. ಹಾಗೆ ನೋಡಿದರೆ, ನವ್ಯಕಾವ್ಯ ಅತಿಯಾದ ನಾಗರಿಕ ಪ್ರಜ್ಞೆಯಿಂದ ಕೂಡಿದೆ ಎಂಬ ಶಿವರುದ್ರಪ್ಪನವರ ಆರೋಪದಲ್ಲಿ ಹೆಚ್ಚು ಹುರುಳಿರುವಂತೆ ತೋರುತ್ತದೆ. ಕೇವಲ ನಗರಗಳಲ್ಲಿ ವಾಸಿಸುವವರ, ಸಮಸ್ತ ಅನುಭವದ ಕೇಂದ್ರವೇ ನಗರ ಎಂದು ಭಾವಿಸುವವರ ಕಾವ್ಯವಾಗಿ ಅದು ಪರಿಣಮಿಸಿದೆ. ಅದು ನಿರೂಪಿಸುವ ಸಮಸ್ಯೆಗಳೂ ವ್ಯಕ್ತಿತ್ವಲೋಪ ಹಾಗೂ ಬೇರಿಲ್ಲದಿರುವಿಕೆಯಂಥ ನಗರದ ಸಮಸ್ಯೆಗಳೇ. ಇಂದಿಗೂ ಭಾರತವು ಹಳ್ಳಿಗಳ ದೇಶವೇ. ಆಧುನಿಕ ಕನ್ನಡ ಕಾವ್ಯ ಈ ಸಂಗತಿಯನ್ನು ಪ್ರತಿಬಿಂಬಿಸುವಲ್ಲಿ ಹಿಂದೆ ಬಿದ್ದಿದೆ. ಆದರೆ ಇದಕ್ಕೆ ಭಿನ್ನವಾದ, ಒಂದು ವಿಚಾರವೂ ಇದೆ: ಆಧುನಿಕ ಭಾರತದಲ್ಲಿ ನಗರಗಳೆ ನಿರ್ಣಾಯಕ ಶಕ್ತಿಗಳಾಗಿರುವುದರಿಂದ ಕವಿಯ ಲಕ್ಷ್ಯ ಅಲ್ಲಿ ಕೇಂದ್ರೀಕೃತವಾಗಿರುವುದು ತಪ್ಪೇನೂ ಅಲ್ಲ ಎಂದು ವಾದಿಸುವವರೂ ಇದ್ದಾರೆ.

ನವ್ಯಕವಿಗಳೇ ಸ್ವತಃ ತಮ್ಮ ಕೃತಿಗಳ ಬಗ್ಗೆ ಏನು ಹೇಳುತ್ತಾರೆಂಬುದನ್ನು ಈಗ ನೋಡೋಣ 'ಹೊಸ ದಿನದ ಆಹ್ವಾನ' ಎಂಬ ಲೇಖನದಲ್ಲಿ ('ಜಯಕರ್ನಾಟಕ' ವಾರಪತ್ರಿಕೆ ೧೧.೧೨.೧೯೫೨) ಅಡಿಗರು, "........... ಕಾಲ ಬದಲಿಸಿದಂತೆ ಕಾವ್ಯ ರೂಪವು ಬದಲಾಗುತ್ತದೆ....... ಕಾವ್ಯದ ಮೂಲವಸ್ತುವಿನಲ್ಲಿ ಅಷ್ಟು ಪರಿವರ್ತನೆ ಆಗದಿದ್ದರೂ ಕವಿಯ ದೃಷ್ಟಿಯಲ್ಲಿ, ಕಾವ್ಯದ ರೀತಿಯಲ್ಲಿ ಕ್ರಾಂತಿ ಆಗುತ್ತ ಬಂದಿದೆ" ಎಂದು ನುಡಿದಿದ್ದಾರೆ. 'ಕನ್ನಡ ಕವಿತೆ ಹೊಸ ಹಾದಿ ತುಳಿಯಬೇಕು' ಎಂಬ ಇನ್ನೊಂದು ಲೇಖನದಲ್ಲಿ ('ಕರ್ಮವೀರ' ೧೦.೧೧.೬೫) ಅವರು, "....... ನಮ್ಮ ಹಿರಿಯರು ನಿಂತಿದ್ದ ನೆಲದ ಮೇಲೆಯೇ ನಾವು ನಿಂತಿರುವೆವಾದರೂ ನಾವು ಅದನ್ನು ಕಾಣುವ

ದೃಷ್ಟಿಯಲ್ಲಿ ಮಾತ್ರ ಈಗ ಮಹತ್ತರವಾದ ಬದಲಾವಣೆಯಾಗಿದೆ" ಎಂದಿದ್ದಾರೆ. ಈ ಹೇಳಿಕೆಗಳು ಯಾವುದೇ ಅತಿರೇಕದಿಂದ ಕೂಡಿರದೆ ತನ್ನ ಹಿಂದಿನ ಸಂಪ್ರದಾಯದ ಬಗ್ಗೆ ಕವಿಗಿರುವ ಸಂಬಂಧವನ್ನು ಒತ್ತಿ ಹೇಳುತ್ತವೆ. ಈಲಿಯಟ್, ಯೀಟ್ಸ್ ಮತ್ತು ಆಡೆನ್‌ರ ಪ್ರಭಾವಕ್ಕೆ ಒಳಗಾಗಿರುವಂತೆಯೇ ಹಳಗನ್ನಡ ಕಾವ್ಯ ಹಾಗೂ ಸಂಸ್ಕೃತ ಕಾವ್ಯಕ್ಕೂ ಋಣಿಯಾಗಿರುವ ಅಡಿಗರು ತಮ್ಮ ಕಾವ್ಯವನ್ನು ಹಿಂದಿನ ಸಂಪ್ರದಾಯದೊಡನೆ ಸಂಬಂಧಗೊಳಿಸುವ ಅಗತ್ಯವನ್ನು ಇವರಿಂದ ಕಲಿತಿದ್ದಾರೆಂದರೆ ತಪ್ಪಾಗದು. 'ನವ್ಯಕಾವ್ಯದಲ್ಲಿ ಅಭಿವ್ಯಕ್ತಿಯ ಸಾಧನೆ' ಎಂಬ ತಮ್ಮದೊಂದು ಲೇಖನದಲ್ಲಿ ('ಜನಪ್ರಗತಿ' ೧.೧೧.೧೯೫೩) ರಾಮಚಂದ್ರ ಶರ್ಮರು ಹೀಗೆ ಬರೆದಿದ್ದಾರೆ: "ಭಾರತದ ಆರ್ಷ ಸಂಪ್ರದಾಯದ ಪ್ರಜ್ಞೆ ನವ್ಯಕಾವ್ಯದ ಸ್ಫೂರ್ತಿಯ ಮೂಲ. ಹೊಸದರತ್ತ, ನಾಳೆಯದರತ್ತ ಕೈ ಕಣ್ಣುಗಳನ್ನು ಚಾಚುವ ಕವಿ ನೆನ್ನೆಗಳನ್ನು ಚೆನ್ನಾಗಿ ಅರ್ಥಮಾಡಿಕೊಂಡಿರುತ್ತಾನೆ. ಕಾಲದ ನಿರಂತರತೆಯ ಅರಿವಿನ ಜೊತೆಗೆ ನವ್ಯಕವಿಯಲ್ಲಿ ಸಾರ್ವಕಾಲಿಕವಾದ ಕೆಲವೊಂದು ದ್ವಂದ್ವಗಳ ತಿಳಿವೂ ಇರುತ್ತದೆ. ಪರಂಪರೆಯ ಈ ಪ್ರಜ್ಞೆ ದ್ವಂದ್ವ ಸಮನ್ವಯ ಕಾರ್ಯದಲ್ಲಿ ಅವನಿಗೆ ನೆರವಾಗುತ್ತದೆ........" ಇದು ಕೂಡ ಅಂಥ ಕ್ರಾಂತಿಕಾರಕ ನಿರೂಪಣೆಯೇನೂ ಅಲ್ಲ. ಹೀಗೆ ಅಡಿಗರ ಇಲ್ಲವೆ ರಾಮಚಂದ್ರ ಶರ್ಮರ ಪ್ರಕಟಿತ ಹೇಳಿಕೆಗಳು ನಮ್ಮ ಕಾವ್ಯ ಸಂಪ್ರದಾಯವನ್ನು ಬುಡಮೇಲು ಮಾಡುವಂಥವೇನೂ ಆಗಿರಲಿಲ್ಲ. ಈ ಬಗೆಯ ಸೌಮ್ಯ ಹಾಗೂ ಎಂದೋ ಆಗಬೇಕಾದ ಬದಲಾವಣೆಗಳು ಸಾಹಿತ್ಯಕ್ಷೇತ್ರದಲ್ಲಿ ಇಷ್ಟೊಂದು ಹಾವಳಿ, ಗದ್ದಲವನ್ನೆಬ್ಬಿಸಿರುವುದು ಭಾರತೀಯರ 'ಸಂಪ್ರದಾಯ ಶರಣತೆ'ಯ- 'ಸಂಪ್ರದಾಯನಿಷ್ಠೆ'ಯದಲ್ಲ- ಕುರುಹು ಎನ್ನದೆ ಗತ್ಯಂತರವಿಲ್ಲ.

ಪ್ರಸಿದ್ಧರಾದ ಕವಿಗಳನೇಕರು ಕೆಲಮಟ್ಟಿಗಾದರೂ ನವ್ಯಕಾವ್ಯದ ಪ್ರಭಾವಕ್ಕೆ ಒಳಗಾಗಿದ್ದರೂ 'ನವ್ಯಕಾವ್ಯ' ಶೈಲಿಯಲ್ಲಿ ಬರೆದ ಇಬ್ಬರು ಹೇಳಿಕೊಳ್ಳುವಂತಹ ಕವಿಗಳೆಂದರೆ, ಗೋಪಾಲಕೃಷ್ಣ ಅಡಿಗ ಹಾಗೂ ರಾಮಚಂದ್ರ ಶರ್ಮ ಅವರು. ಅಡಿಗರ ಕಾವ್ಯ ಆಧುನಿಕ ಕನ್ನಡ ಕಾವ್ಯದಲ್ಲಿ ಅತ್ಯಂತ ಸತ್ವಪೂರ್ಣವಾದದ್ದು. ಅವರ ಕಾವ್ಯವಸ್ತು ಅಷ್ಟೊಂದು ಸರಳವಾದದ್ದಲ್ಲ; ಅನೇಕ ಸಲ ಅಸ್ಪಷ್ಟತೆಗೂ ಎಡೆಗೊಡುತ್ತದೆ. ಆದರೆ ಅವರ ಪದ್ಯದ ಶಕ್ತಿ ನಿರ್ವಿವಾದವಾದದ್ದು. ಅವರ ಕಾವ್ಯ ಸಾಮಾಜಿಕ ಅರಿವಿನಿಂದ ಕೂಡಿದ್ದೂ ಆಗಾಗ ಹರಿತವಾದ ವಿಡಂಬನೆಯನ್ನು ಕಾಣಿಸಿದರೂ ಅದು ಮೂಲತಃ ತನ್ನ ಮುಖಾಂತರ ವಿಶ್ವದ ಅನ್ವೇಷಣೆಗೆ ತೊಡಗಿದ್ದು. ಅವರ ದೀರ್ಘ ಕವಿತೆ 'ಭೂಮಿಗೀತ'ವನ್ನೇ ತೆಗೆದುಕೊಳ್ಳಿ. ಜಗತ್ತಿನೊಡನೆ ಜೀವದ ವ್ಯರ್ಥ ಹೋರಾಟದ ಧ್ವನಿಯೊಂದಿಗೆ ಕವಿತೆ ಕೊನೆಗೊಳ್ಳುತ್ತದೆ:

ಗೋಡೆ ತಡಕುತ ಇನ್ನು ತೆವಳಬೇಕು
ಹೆಳವನ ಹೆಗಲಮೇಲೆ ಕುರುಡ ಕೂತಿದ್ದಾನೆ;
ದಾರಿ ಸಾಗುವದೆಂತೊ ನೋಡಬೇಕು.

ಕವಿತೆಯ ಕೊನೆ ಹಾಗೂ ಅದರ ಕೆಲವು ಭಾಗಗಳು ಹತಾಶೆಯ, ತೀವ್ರ ನಿರಾಶೆಯ ಲಕ್ಷಣವನ್ನು ತೋರಿಸಿದರೂ ಪ್ರತಿಭಾ ಸೃಷ್ಟಿಯ ಆನಂದವೂ ಅಲ್ಲಿದೆ. ಈ ಕವಿತೆಯ 'ಎಳಹರೆಯ'ದ ಭಾಗ ಭೂಮಿಯ ಫಲವತ್ತತೆಯನ್ನು ಪ್ರಶಂಸಿಸುತ್ತದೆ. ಕಾವ್ಯ ಆಶಾವಾದಿತ್ವದಿಂದ ಕೂಡಿರಬೇಕೆಂದು ಬಯಸುವವರು ಕಾವ್ಯದ ಸ್ವಾಭಾವಿಕ ಕಾರ್ಯದ ಬಗ್ಗೆ ತಪ್ಪು ತಿಳಿದುಕೊಂಡಿರಬಹುದು. ಕವಿ ಮೊಟ್ಟಮೊದಲು ತನ್ನ ಜೀವನದ ದರ್ಶನಕ್ಕೆ ನಿಷ್ಠನಾಗಿರಬೇಕಾಗುತ್ತದೆ. ಅವನ ನೋಟ ಆಶಾವಾದದಿಂದ ಕೂಡಿದ್ದರೆ ಅದು ಒಳ್ಳೆಯದೇ. ಹಾಗಿರದಿದ್ದರೆ ಮುಂದೇನು? 'ಗೊಂದಲಪುರ'ದಂತಹ ತಮ್ಮ ಮೊದಲಿನ ಕೃತಿಗಳಲ್ಲಿ ಅಡಿಗರು ಆಧುನಿಕ ನಾಗರಿಕ ಜೀವನದ ಅವ್ಯವಸ್ಥೆ ಹಾಗೂ ವ್ಯರ್ಥತೆಯನ್ನು ಚಿತ್ರಿಸಿದ್ದಾರೆ. ಒಂದು ರೀತಿಯಲ್ಲಿ ಇವು ನಿಷೇಧಾರ್ಥಕ ಹೇಳಿಕೆಗಳು. ಅವರ ಆ ಮೇಲಿನ ಕೃತಿಗಳಲ್ಲಿ, ಉದಾಹರಣೆಗೆ 'ಭೂಮಿಗೀತ'ದಲ್ಲಿ ಇದಕ್ಕೂ ತುಂಬ ಕಠಿಣವಾದ ದೊಡ್ಡ ಪ್ರಯತ್ನದಲ್ಲಿ ಕವಿ ತೊಡಗಿರುವುದನ್ನು ಕಾಣುತ್ತೇವೆ. ಕಾವ್ಯ ಇಲ್ಲಿ ವಿವಿಧ ಸ್ತರಗಳಲ್ಲಿ ಕೆಲಸ ಮಾಡುತ್ತಿದ್ದು, ಅವನ್ನೆಲ್ಲ ಒಟ್ಟಾರೆಯ ತಂತ್ರವಿನ್ಯಾಸ ಗಟ್ಟಿಯಾಗಿ ಹಿಡಿದುಕೊಂಡಿದೆ. ಡಿಲಾನ್ ಥಾಮಸ್‌ನ ಭಾಷೆಯಂತೆ ಒರಟಾಗಿ, ಸಮೃದ್ಧವಾಗಿರುವ ಅವರ ಭಾಷೆ ಇಲ್ಲಿ ಇನ್ನೂ ಹೆಚ್ಚು ಹಿಡಿತಕ್ಕೆ ಬಂದಿದೆ. ಮುಂದೆ ಉದಾಹರಿಸಿದಂತಹ ಸಾಲುಗಳನ್ನು ಅಡಿಗರು ಈ ಮೊದಲು ಬರೆಯಬಲ್ಲವರಾಗಿದ್ದರೆಂದು ಊಹಿಸುವುದೂ ಕಷ್ಟ:

ತೊಟ್ಟಿಲಂಗಡಿಯಲ್ಲಿ ಬೊಂಬು ತುಂಬಾ ಅಗ್ಗ ;<br>
ಜಾತಕರ್ಮಾದಿ ನಿರತ ಈ ಪುರೋಹಿತಭಟ್ಟ, ಅಪರ ಪ್ರಯೋಗದಲಿ ಪಾರಂಗತ.

ಈ ಬಗೆಯ ಕಾವ್ಯದ ಉತ್ಕೃಷ್ಟವಾದ ಗುಣವೆಂದರೆ ನಮ್ಮ ಅನುಭವ ಜಗತ್ತಿನ ಬೇರುಗಳ ನಿಷ್ಠುರವಾದ ಹುಡುಕಾಟವೆಂದು ಹೇಳಬಹುದು. ಕವಿಯ ಭಾಷೆಯೂ ಕೂಡ ಅವನು ಕೈಕೊಂಡ ಕಾರ್ಯಕ್ಕೆ ತಕ್ಕ ಹಾಗೆ ದುಡಿದಿದೆ. ವಿಷಯಕ್ಕೆ ತಕ್ಕ ಸಮಕಾಲೀನ ಭಾಷೆಯಿಂದ ಹಿಡಿದು ಅತ್ಯಂತ ಕೃತಕವಾಗಿ ಕಾಣುವ ಪ್ರಾಚೀನ ಪ್ರೌಢ ಭಾಷೆಯ ವರೆಗೂ ಹಬ್ಬಿದ ಹರಹು ಅವರದು. ಅಡಿಗರ ಕಾವ್ಯ ಬರಿ ನಿರಾಶೆಯ ಕಾವ್ಯವಲ್ಲ; ಕೊನೆಗೆ ವಿಶ್ಲೇಷಣೆಯಲ್ಲಿ ಕಂಡುಬರುವಂತೆ ವ್ಯಂಗ್ಯ ಕಾವ್ಯ. ವ್ಯಂಗ್ಯ, ಯಾವಾಗಲೂ, ನಿರಾಶೆಯ ವಿರುದ್ಧ ಮನುಷ್ಯ ಎತ್ತುವ ಮಸೆದಲಗಾಗಿದೆ. ಅಡಿಗರ ಕಾವ್ಯ(ಯಾರ ಕಾವ್ಯವಲ್ಲ?)ಕ್ಕೂ ಅವರದೇ ಆದ ದೌರ್ಬಲ್ಯಗಳಿವೆ. ಅವುಗಳಲ್ಲಿ ಹೆಚ್ಚಿನದೆಂದರೆ ಕನಿಷ್ಠ ಮಿತಿಯ ಸ್ಪಷ್ಟತೆಗೂ ಎರವಾಗುವಂತೆ ಪ್ರತಿಮೆಗಳನ್ನು ತುಂಬಿ ತುರುಕುವುದು. ಕೆಲವು ಸಂದರ್ಭಗಳಲ್ಲೇನೊ ಈ ಪದ ಸಮೃದ್ಧಿಯನ್ನು ಪೂರ್ಣ ಅನುಮೋದಿಸಬಹುದು; ಆದರೆ ಎಷ್ಟೋ ಸಲ ಅದು ಸಾಧ್ಯವಿಲ್ಲ. ಇದರಿಂದ ಉದ್ಭವಿಸುವ ಇನ್ನೊಂದು ದೋಷವೆಂದರೆ ವಸ್ತುವಿನ ಕೊರತೆಯನ್ನು ವಾಗಾಡಂಬರದಲ್ಲಿ ಅಡಗಿಸಿಬಿಡುವ ರಹಸ್ಯಪೂರ್ಣ ಕೌಶಲ್ಯ. ಆದರೆ ಅವರ ಅತ್ಯುತ್ತಮ ಕಾವ್ಯದಲ್ಲಿ ಈ ದೋಷಗಳು ಕಾಣಲಾರವು. ಒಂದು ವೇಳೆ ಇದ್ದರೂ ಕಾವ್ಯವನ್ನು ಬಲಗೊಳಿಸುವಲ್ಲಿ ಅವು ರೂಪಾಂತರ ಹೊಂದಿರುವುದುಂಟು.

ರಾಮಚಂದ್ರ ಶರ್ಮರು ಅಷ್ಟೊಂದು ಯಶಸ್ವಿ ಕವಿಯಲ್ಲ. ಅಡಿಗರ ಕಾವ್ಯದ ದೋಷಗಳೆಲ್ಲವೂ ಇವರ ಕಾವ್ಯದಲ್ಲಿವೆ. ಆದರೆ ಅವರ ಕಾವ್ಯದ ಸಾಮರ್ಥ್ಯ ಮಾತ್ರ ಇಲ್ಲಿ ಇಲ್ಲ. ಇವರಿಬ್ಬರ ಕಾವ್ಯಗಳಲ್ಲಿಯೂ ಲೈಂಗಿಕ ಪ್ರತಿಮೆಗಳ ಕಾರ್ಯಭಾಗವನ್ನು ಹೋಲಿಸಿ ನೋಡಿದರೆ ಇದು ಸ್ಪಷ್ಟವಾಗುತ್ತದೆ. ತನ್ನಷ್ಟಕ್ಕೆ ಇದನ್ನು ಕುಂದಾಗಿ ಎಣಿಸಬೇಕಾಗಿಲ್ಲವಾದರೂ ಅಡಿಗರ ಕಾವ್ಯದಲ್ಲಿ ಲೈಂಗಿಕತೆ ಒಂದು ಗೀಳು ಎನಿಸುವುದಿಲ್ಲ. ಶರ್ಮರಲ್ಲಿ ಲೈಂಗಿಕ ವಸ್ತು ಮಿತಿಮೀರಿ ಬರುತ್ತಿರುವುದಲ್ಲದೆ ಎಂಥ ಶಬ್ದ ಸಂಪತ್ತಿನಿಂದಲೂ ಅದನ್ನು ಮುಚ್ಚಿಡಲು ಸಾಧ್ಯವಾಗುವುದಿಲ್ಲ. 'ಏಳು ಸುತ್ತಿನ ಕೋಟೆ'ಯಂಥ ಯಶಸ್ವಿ ಕವಿತೆಗಳಿಗೂ ಈ ಮಾತು ಅನ್ವಯಿಸುತ್ತದೆ. ಅಲ್ಲದೆ ಅವರ ಪ್ರತಿಮೆಗಳು ಒರಟಾಗಿಯೇ ಇದ್ದು ಭಾಷೆ ಅಡಿಗರ ಭಾಷೆಯ ಅಂತಸ್ಸತ್ವಕ್ಕೆ ಹೊರತಾಗಿದೆ.

೧೯೬೪ರಲ್ಲಿ ಪ್ರಕಟವಾದ ಕನ್ನಡ ಕಾವ್ಯದ ಸಮೀಕ್ಷೆಯೊಂದರಲ್ಲಿ ಎಸ್.ಆರ್. ಮೊಕಾಶಿ- ಪುಣೇಕರ ಅವರು 'ನವೋದಯ' ಹಾಗೂ 'ನವ್ಯ' ಎಂದು ಗೆರೆ ಕೊರೆದಂತೆ ಕವಿಗಳನ್ನು ಎರಡೇ ಬಗೆಯಾಗಿ ವಿಭಾಗಿಸುವುದನ್ನು ಸೂಕ್ತವಾಗಿ ವಿರೋಧಿಸಿದ್ದಾರೆ. ಮೂರು ಬಗೆಯ ವಿಭಜನೆ ಹೆಚ್ಚು ಸಮಂಜಸವಾದುದೆಂದು ಅವರ ಸೂಚನೆ. ಶುದ್ಧ ನವೋದಯ ಇಲ್ಲವೆ ಅಚ್ಚ ನವ್ಯ ಶೈಲಿಯನ್ನು ಅನುಸರಿಸದಿರುವ ಕವಿಗಳು ಸಾಕಷ್ಟಿದ್ದಾರೆ. ಇವರೆಡೂ ಶೈಲಿಗಳ ವೈಶಿಷ್ಟ್ಯಗಳನ್ನು ಇವರು ಹೊಂದಿಸಿಕೊಂಡು ಬರೆಯುತ್ತಿದ್ದು ಅದಕ್ಕೊಂದು ಅಂಕಿತದ ಅವಶ್ಯವಿದೆ. ಅವರ ಸೂಚನೆಯಂತೆ ಈ ಕವಿಗಳಲ್ಲಿ 'ಎಡ (ನವ್ಯ) - ನಡು (ನವ?) - ಬಲ (ನವೋದಯ)'ಗಳ ತ್ರಿವೇಣಿ ಮೂಡುವ ಲಕ್ಷಣಗಳು ಕಾಣುತ್ತಿದ್ದು, ಅದೊಂದು ಸ್ವತಂತ್ರ ಪ್ರವಾಹವೆನಿಸುವಷ್ಟು ವಿಸ್ತಾರಗೊಂಡಿದೆಯೆಂದು ಅವರು ಹೇಳುತ್ತಾರೆ. ಹಾಗೆ ಮಾಡಿದರೆ ಬಹುತೇಕ ಕವಿಗಳು 'ನಡು'ವಿನಲ್ಲಿ ಸೇರುತ್ತಾರೆ. ನಿಜವಾಗಿಯೂ ಇದು ಇದ್ದ ಮಾತು. ಹಲವಾರು ತರುಣ ಕವಿಗಳು, ಮತ್ತು ಅಷ್ಟು ತರುಣರಲ್ಲದ ಇನ್ನು ಕೆಲವರು ನವೋದಯ- ನವ್ಯದ ಕಾದಾಟದಲ್ಲಿ ಮನಸ್ಸು ಹಾಕದೆ ತಮಗೆ ತೋರಿದ ದಾರಿಯಲ್ಲಿ, ತಮಗೆ ಬೇಕಾದುದನ್ನು ಯಾವ ಕಡೆಯಿಂದಲಾದರೂ ಆರಿಸಿಕೊಳ್ಳುತ್ತ ಸಾಗಿದ್ದಾರೆ. ಹಾಗೆ ನೋಡಿದರೆ ಅನೇಕ ತರುಣ ಕವಿಗಳಲ್ಲಿ ಕಂಡುಬರುವ ಈ ಸಮನ್ವಯ ಅವರಿಗರಿವಿಲ್ಲದೆಯೇ ಮೂಡಿದ್ದು. ಎಷ್ಟೋ ಕವಿಗಳಲ್ಲಿ ಅದು ಪಿತ್ರಾರ್ಜಿತವಾಗಿಯೇ ಬಂದದ್ದು. ವ್ಯಕ್ತಿ ವೈಲಕ್ಷಣ್ಯದಿಂದಾಗಿ ಅವರೆಲ್ಲರ ಬಗ್ಗೆ ಒಟ್ಟಾಗಿ ಅಭಿಪ್ರಾಯ ಹೇಳುವುದು ಸಾಧ್ಯವಿಲ್ಲ. ಈ ಮೊದಲು ನವೋದಯ ಶೈಲಿಯಲ್ಲಿ ಬರೆಯುತ್ತಿದ್ದವರು ನವ್ಯಕಾವ್ಯದ ಆಹ್ವಾನಕ್ಕೆ ಪ್ರತಿಕ್ರಿಯೆಯಾಗಿ ತಮ್ಮ ನಿಲವು ನೋಟ, ರೀತಿ ತಂತ್ರಗಳಲ್ಲಿ ಮಾರ್ಪಾಟನ್ನು ತಂದುಕೊಂಡವರು ಹಾಗೂ ಇಂಥ ಸಮನ್ವಯಕ್ಕೆ ಬುದ್ಧಿಪೂರ್ವಕ ಪ್ರಯತ್ನದ ಯಾವ ಲಕ್ಷಣವನ್ನೂ ತೋರದ ತರುಣ ಕವಿಗಳು- ಹೀಗೆ ಇವರನ್ನು ನಮ್ಮ ಅನುಕೂಲದ ದೃಷ್ಟಿಯಿಂದ ಎರಡು ಗುಂಪುಗಳಾಗಿ ಮಾಡಬಹುದು.

ಈ ಅಂಶ ಇಬ್ಬರಲ್ಲಿಯೂ ಕಂಡುಬರುವುದರಿಂದ ಅಷ್ಟೊಂದು ಸುಲಭವಾಗಿ ಇವರನ್ನು ವರ್ಗೀಕರಿಸುವುದು ಸಾಧ್ಯವಿಲ್ಲ.

ತಮ್ಮ ಮನೋಧರ್ಮಕ್ಕೆ ಒಗ್ಗಿಬಂದಿರುವ ನವೋದಯ ಶೈಲಿಯಲ್ಲಿ ಬರೆವಣಿಗೆಯನ್ನು ಮುಂದುವರಿಸಿರುವ ಕವಿಗಳ ಬಗ್ಗೆ ಕೆಲವು ಮಾತುಗಳನ್ನು ಇಲ್ಲಿ ಹೇಳಬಹುದು. ಇವರಲ್ಲಿ ಅಗ್ರಗಣ್ಯರೆಂದರೆ ಕಾವ್ಯಾನಂದ ಎಂಬ ಕಾವ್ಯನಾಮದಿಂದ ಬರೆಯುತ್ತಿರುವ ಸಿದ್ಧಯ್ಯ ಪುರಾಣಿಕರು. ಅವರ ಕಲ್ಪನಾಶಕ್ತಿ ರಮ್ಯದ ರೀತಿಯಲ್ಲಿ ಸಮೃದ್ಧವಾಗಿದ್ದು ಅವರ ಭಾಷೆಯೂ ಸಹಜವಾಗಿಯೇ ಕೊಂಚ ವಾಗ್ಮಿತೆಯಿಂದ ಕೂಡಿದೆ. ಅವರ ಶಬ್ದ ಚಿತ್ರಗಳು ಸರಳ ಹಾಗೂ ಸಾಂಪ್ರದಾಯಿಕ. ಸ್ವಚ್ಛವಾದ ವಸ್ತು, ಅಚ್ಚುಗಟ್ಟಾದ ರೂಪಕಗಳು ಹಾಗೂ ಭಾಷೆಯ ಮೇಲಿನ ಪ್ರಭುತ್ವದಿಂದಾಗಿ ಅವರ ಕಾವ್ಯ, ಪರಂಪರೆಯ ಕಾವ್ಯದಂತೆ ತೃಪ್ತಿಯನ್ನು ನೀಡಬಲ್ಲುದು. ಇದೇ ಮಾರ್ಗದಲ್ಲಿ ಬರೆಯುತ್ತಿರುವ ಮತ್ತು ಈ ಬಗೆಯ ಕಾವ್ಯದ ಗುಣದೋಷಗಳನ್ನೆಲ್ಲ ತಮ್ಮ ಕಾವ್ಯದಲ್ಲಿ ತೋರ್ಪಡಿಸುತ್ತಿರುವ ಕವಿಗಳದೊಂದು ಪಟ್ಟಿಯನ್ನೇ ಇಲ್ಲಿ ಕೊಡಬಹುದು. ವಿಸ್ತಾರವಾದ ವಿಶ್ಲೇಷಣೆಗೆ ಇಲ್ಲಿ ಎಡೆಯಿಲ್ಲವಾಗಿ. ಶ್ರೀಮಂತವಾದ ರಮ್ಯ ಕಲ್ಪನೆ ಹಾಗೂ ನಾದಗುಣದಿಂದ ಕೂಡಿದ ಡಿ.ಎಸ್. ಕರ್ಕಿ, ಸರಳವಾದ ಕಾವ್ಯ ವಸ್ತುವಿನ ಎಸ್.ಡಿ. ಇಂಚಲ, ಒಡೆದು ಕಾಣುವ ಭಕ್ತಿಪರ ಭಾವನೆಯ ಈಶ್ವರ ಸಣಕಲ್ಲ ಹಾಗೂ ಧಾರ್ಮಿಕ ಭಾವನೆಯ ಹಾಗೂ ಗೇಯತೆಗೆ ಒಲಿದ ಎಸ್.ಆರ್. ಎಕ್ಕುಂಡಿ- ಇವರನ್ನಿಲ್ಲಿ ಹೆಸರಿಸಬಹುದು. ಪೌರಾಣಿಕ ವಸ್ತು ಹಾಗೂ ಸಂಕೇತಗಳನ್ನು ಆಧುನಿಕ ಶೈಲಿಯಲ್ಲಿಯೂ ಎಕ್ಕುಂಡಿಯವರು ನಿರ್ವಹಿಸಬಲ್ಲರು. ದಿನಕರ ದೇಸಾಯಿಯವರು ಒಂದು ರೀತಿ ವಿಲಕ್ಷಣ ಕವಿ. ಅವರ ಕಾವ್ಯ ವಿಡಂಬನಪ್ರಧಾನವಾಗಿದ್ದು ನಾಟುನುಡಿಯ ಶೈಲಿಯ, ಈಚೆಗೆ ಹೆಚ್ಚು ಪ್ರಚಲಿತವಾಗಿರುವ 'ಚುಟುಕು'ಗಳನ್ನು ಅವರು ವಿಶೇಷವಾಗಿ ಬರೆದಿದ್ದಾರೆ. ಈ ಬಗೆಯ ಪದ್ಯಗಳ ಕಾವ್ಯಗುಣ ಪರಿಮಿತವಾಗಿದ್ದು ಇಲ್ಲಿಯ ಭಾವ ಬರಿಯ ಚಮತ್ಕಾರದಲ್ಲಿ ಪರ್ಯವಸಾನಗೊಳ್ಳುವ ಭಯವಿದೆ. ದೇಸಾಯಿಯವರ 'ಮಂತ್ರಿಯ ನಿಧನ' ಕವಿತೆಯಲ್ಲಿಯಂತೆ ಅದು ಒಮ್ಮೊಮ್ಮೆ ಒಳ್ಳೇ ಪರಿಣಾಮಕಾರಿಯಾಗಿಯೂ ರೂಪುಗೊಳ್ಳಬಲ್ಲುದು.

ಆ ಕಾಲಕ್ಕೆ ಜೀವಂತ ಸಂಪ್ರದಾಯವಾಗಿದ್ದ ನವೋದಯ ಶೈಲಿಯ ವಿಕಾಸದೊಡನೆ ತಮ್ಮ ಕಾವ್ಯಜೀವನವನ್ನು ಪ್ರಾರಂಭಿಸಿದರೂ ನವ್ಯಕಾವ್ಯ ಶೈಲಿಯ ಜೀವ ಚೈತನ್ಯದ ಭರವಸೆಯನ್ನು ಕಡೆಗಾಣಿಸದಿದ್ದ ಕೆಲವು ಕವಿಗಳ ಬಗ್ಗೆ ಈಗ ನೋಡೋಣ: ಈ ಗುಂಪಿನ ಕವಿಗಳು ನಿರ್ಮಿಸಿದ ಕಾವ್ಯದ ಮೊತ್ತ ಕನ್ನಡದಲ್ಲಿ ಕಳೆದೆರಡು ದಶಕಗಳಲ್ಲಿ ಬಂದಿರುವ ಕಾವ್ಯದಲ್ಲಿಯೇ ಅತ್ಯಂತ ತೃಪ್ತಿದಾಯಕವಾದದ್ದು ಎಂದು ವಾದಿಸುವವರಿದ್ದಾರೆ. ಗೋಕಾಕ ಮತ್ತು ನರಸಿಂಹಸ್ವಾಮಿಗಳಂತಹ ಹಿರಿಯ ಕವಿಗಳು ನವ್ಯಕಾವ್ಯದೊಡನೆ ಹೇಗೆ ಒಡಂಬಡಿಕೆ ಮಾಡಿಕೊಂಡರೆಂಬುದನ್ನು ನಾವು ಈಗಾಗಲೇ ನೋಡಿದ್ದೇವೆ. ಈಗ ಇಲ್ಲಿ ಪರಿಶೀಲಿಸಬೇಕಾಗದ ಕವಿಗಳೆಂದರೆ ವಿ.ಜಿ.ಭಟ್ಟ, ಜಿ.ಎಸ್. ಶಿವರುದ್ರಪ್ಪ, ಚೆನ್ನವೀರ

ಕಣವಿ ಹಾಗೂ ಗಂಗಾಧರ ಚಿತ್ತಾಲ ಅವರು. ಯಾವುದೋ ಒಂದು ಗುಂಪಿಗೆ ಸುಲಭವಾಗಿ ಸೇರಿಸಬಹುದಾದ ಕವಿಯಲ್ಲ ಬಿ.ಜಿ. ಭಟ್ಟರು. ಪ್ರಚಲಿತ ಕನ್ನಡ ಕಾವ್ಯದಲ್ಲಿ ಅವರದು ವಿಶಿಷ್ಟವಾದ ಧ್ವನಿ. ಅವರ ಕಾವ್ಯದಲ್ಲಿ ಒಡೆದುಕಾಣುವ, ಎಲ್ಲವನ್ನೂ ಅಣಕಿಸುವ ಒಣ ವ್ಯಂಗ್ಯ ಮತ್ತು ಜೀವನದ ಕುಂದುಕೊರತೆಗಳ ನಿರೂಪಣೆ ಆಧುನಿಕ ಕನ್ನಡ ಕಾವ್ಯದಲ್ಲಿ ತೀರ ವಿರಳವಾದಂತಹದು. ಐತಿಹಾಸಿಕ ಹಾಗೂ ಸಿದ್ಧಾಂತ ರೂಪದ ಚರ್ಚೆಯ ಸಂದರ್ಭದಲ್ಲಿ ಈ ಕವಿ ಅಷ್ಟೊಂದು ಗಣನೆಗೆ ಬಾರದಂಥವರು. ತಮ್ಮ ಜೀವನದರ್ಶನದ ಬಗೆಗಿನ ಶ್ರದ್ಧೆ, ಸ್ತುತಿಗಿಳಿಯದ ಮನೋಧರ್ಮ ಹಾಗೂ ಮೂಲ ಪ್ರಾಮಾಣಿಕತೆ- ಇವು ನಿಜಕ್ಕೂ ಗಮನಾರ್ಹವಾಗಿವೆ. ಈ ಗುಣಗಳನ್ನು ಅವರ ಚಿಕ್ಕ ಪದ್ಯ 'ಚಿಂತೆ'ಯಲ್ಲಿ ಕಾಣಬಹುದು. ಕವಿತೆ ಹೀಗೆ ಕೊನೆಗೊಳ್ಳುತ್ತದೆ:

> ಹೊರ ಜಗತ್ತಿನ ವಿಷಯ ನೂರೆಂಟು ತಿಳಿದರೂ
> ನನ್ನೊಳಗಿನದು ಮಾತ್ರ ಏನು ತಿಳಿಯೆ.

ವಿದ್ವತ್ ಪ್ರಪಂಚದಲ್ಲಿಯೂ ಹೆಸರಾದ ಜಿ.ಎಸ್. ಶಿವರುದ್ರಪ್ಪನವರು ನವ್ಯಕಾವ್ಯದ ಪ್ರತಿಭಟನೆಯ ವ್ಯವಹಾರವನ್ನು ಸಂಶಯದಿಂದ ನೋಡುವುದು ಅನಿರೀಕ್ಷಿತವೇನೂ ಅಲ್ಲ. ಅವರ ಮೊದಲಿನ ಕಾವ್ಯದಲ್ಲಿ ನವ್ಯಕಾವ್ಯದ ವಿಶಿಷ್ಟ ಗುಣಗಳು ಕಂಡುಬಾರದಿರಬಹುದು. ಆದರೆ ಅವರ ಆಮೇಲಿನ ಕಾವ್ಯ ಅದಕ್ಕೆ ಸಮೀಪವರ್ತಿಯಾಗಿದೆ. ಈ ಸಂಗ್ರಹದ 'ಇವನು' ಹಾಗೂ 'ಗಡಿಯಾರದಡಿಯಲ್ಲಿ' ಕವಿತೆಗಳು ಇದಕ್ಕೆ ನಿದರ್ಶನವಾಗಿವೆ. ಸೂಕ್ಷ್ಮ ಮನಸ್ಸಿನ ಕವಿಯಾದ ಅವರು ಹಾಗೂ ಚೆನ್ನವೀರ ಕಣವಿ- ಇಬ್ಬರೂ 'ಮಧ್ಯ ಮಾರ್ಗ'ದ ಅಥವಾ ಎಡ-ಬಲಗಳ 'ನಡು'ವಿನ ಶೈಲಿಯ ಶ್ರೇಷ್ಠ ಪ್ರತಿನಿಧಿಗಳಾಗಿದ್ದಾರೆ. ಆದರೆ ಅವರು ತಮ್ಮ ರಮ್ಯ ಕಲ್ಪನಾ ವಿಲಾಸವನ್ನೂ, ಹಾಗೂ ಭಾವಾವೇಶದ ಅಗತ್ಯಗಳನ್ನೂ ಬಿಟ್ಟುಕೊಟ್ಟಿಲ್ಲ. ಈ ಇಬ್ಬರ ಕವಿತೆಗಳಲ್ಲಿ ನೋಡಲು ಸಾಂಪ್ರದಾಯಿಕವೆನಿಸುವ ವಸ್ತುವನ್ನು ನವ್ಯಕಾವ್ಯದ ವೈಶಿಷ್ಟ್ಯವಾದ ಸಂಕೀರ್ಣತೆಯ ತಂತ್ರದೊಂದಿಗೆ ಯಶಸ್ವಿಯಾಗಿ ನಿರ್ವಹಿಸಲಾಗಿದೆ. ಎಲ್.ಎಸ್. ಶೇಷಗಿರಿರಾವ್ ಅವರು ತಮ್ಮ ಇತ್ತೀಚಿನ ಒಂದು ವಿಮರ್ಶಾತ್ಮಕ ಲೇಖನದಲ್ಲಿ ಕಣವಿಯವರ ಕಾವ್ಯದ ಬಗ್ಗೆ ಬರೆಯುತ್ತ "ನವ್ಯಕವಿಯಂತೆ ಅವರು ಮನುಷ್ಯ ವ್ಯಕ್ತಿಯನ್ನು ಅನಂತವಾದ ಕಾಲ ಹಾಗೂ ದೇಶದ ಹಿನ್ನೆಲೆಯಲ್ಲಿ ನೋಡಬಯಸುತ್ತಾರೆ; ಹಾಗೆಯೇ ಮಂದಿಯ ನಡುವೆ ಒಂಟಿಯಾಗಿಯೂ ನೋಡಬಲ್ಲರು" ಎಂದಿರುವುದು ಸಮಂಜಸವಾಗಿದೆ.

ಪ್ರಾರಂಭದಲ್ಲಿ ನವೋದಯ ಶೈಲಿಯಲ್ಲಿ ಬರೆಯತೊಡಗಿದ್ದ ಗಂಗಾಧರ ಚಿತ್ತಾಲರು ನವ್ಯ ಶೈಲಿಗೆ ನಿಕಟವರ್ತಿಗಳಾಗುತ್ತ ಬಂದಿದ್ದಾರೆ. ಅವರ ಈಚಿನ ಸಂಗ್ರಹ 'ಹರಿವ ನೀರಿದು' ಇದಕ್ಕೆ ಸಾಕಷ್ಟು ಪ್ರಮಾಣಗಳನ್ನೊದಗಿಸುತ್ತದೆ.

ನವೋದಯ ಇಲ್ಲವೆ ನವ್ಯ ಎಂದು ಕರೆಯಲು ಬಾರದ ಕವಿಗಳ ಇನ್ನೊಂದು ಗುಂಪನ್ನು ಕೊನೆಯದಾಗಿ ಈಗ ಪರಿಶೀಲಿಸಬಹುದು. ಒಂದು ಶೈಲಿಯಿಂದ ಮತ್ತೊಂದಕ್ಕೆ

ಒಲಿದ ಇಲ್ಲವೆ, ಸಮನ್ವಯ ಶೈಲಿಯ ರೀತಿಯಲ್ಲಿ ಅವರ ಕಾವ್ಯ ಜೀವನವನ್ನು ವಿವರಿಸಲು ಬರುವಂತಿಲ್ಲ. ವೈಯಕ್ತಿಕವಾಗಿ ಅವರು ಪ್ರತ್ಯೇಕತೆಯನ್ನು ಪಡೆದವರಾಗಿದ್ದಾರೆ. ಅವರಿಗೆ ಇದು ಸಾಧ್ಯವಾಗಲು ಕಾರಣ ಕಣವಿ ಹಾಗೂ ಶಿವರುದ್ರಪ್ಪನವರಂಥ ಕವಿಗಳು ಕಾವ್ಯ ಮಾರ್ಗದಲ್ಲಿ ಒಟ್ಟಾಗಿ ಗಳಿಸಿದ್ದರ ಪರಿಣಾಮವೆಂದು ಹೇಳಿದರೆ ತಪ್ಪಾಗದು. ಈ ಗುಂಪಿನ ಕವಿಗಳ ಕಾವ್ಯ ನಮಗೆ ಹೆಚ್ಚು ಸಮಕಾಲೀನವಾಗಿರುವುದರಿಂದ ಯಾವುದೇ ಸಾಮಾನ್ಯ ಸೂತ್ರ ನಿರೂಪಣೆ ಸೂಕ್ತವೆನಿಸದು. ತಾತ್ಕಾಲಿಕವಾಗಿ ತೀರ ಸಂಕ್ಷಿಪ್ತ ರೀತಿಯಲ್ಲಿ ಅವರ ಬಗ್ಗೆ ಎರಡು ಮಾತು ಹೇಳಬಹುದು. ಈಚಿನ ಹೊಸ ಇಂಗ್ಲಿಷ್ ಕವಿಗಳನ್ನು ಅವರು ಅಲ್ಪಸ್ವಲ್ಪ ಹೋಲುತ್ತಿದ್ದು ಸುಲಭವಾಗಿ ಒಂದು ಸಾಲಿನಲ್ಲಿ ಅವರನ್ನು ನಿಲ್ಲಿಸುವುದು ಸಾಧ್ಯವಿಲ್ಲ. ಅವರಲ್ಲಿ ಕೆಲವರು ಎ.ಕೆ. ರಾಮಾನುಜನ್‌ರಂತೆ (ಅವರು ಮೂಲ ಇಂಗ್ಲಿಷಿನಲ್ಲಿಯೂ ಮೇಲಾದ ಕವಿತೆಗಳನ್ನು ಬರೆಯುತ್ತಾರೆ.) ಚುರುಕಾದ ಸನ್ನಿವೇಶಗಳ ಸರಣಿಯಾಗಿ ಜೀವನವನ್ನು ನೋಡಬಹುದು. ಆದರೆ ರಾಮಾನುಜನ್‌ರ ಕಾವ್ಯ ಮೊದಲ ನೋಟಕ್ಕೆ ಜಾಣತನದ್ದಾಗಿ ತೋರಿದರೂ ಆಳದಲ್ಲಿ ಮನುಷ್ಯನ ಅನಿವಾರ್ಯ ತಾಪತ್ರಯಗಳ ಬಗ್ಗೆ ತೀರ ಗಂಬೀರವಾದ ಆಸಕ್ತಿಯನ್ನು ಹೊಂದಿದೆ. 'ಇದೂ ಒಂದು ಕವನ'ದಲ್ಲಿ ಇದು ಚೆನ್ನಾಗಿ ಅಭಿವ್ಯಕ್ತಗೊಂಡಿದೆ. ಕಾವ್ಯದ ಮೇಲೆ ಚಾತುರ್ಯದಿಂದ ಕೂಡಿದ ಟೀಕೆಯಾಗಿ ಪ್ರಾರಂಭಗೊಂಡು ಕವಿ ಏನು ಮಾಡಿದ್ದಾನೆಂಬುದನ್ನು ನಾವು ಅರ್ಥಮಾಡಿಕೊಳ್ಳುವ ಮೊದಲೆ ಕಾವ್ಯದ ಪ್ರತಿಕ್ರಿಯೆಯ ಬಗ್ಗೆ ಗಾಢವಾದ ಪ್ರಜ್ಞೆಯನ್ನು ಹೊಂದಿರುವ ಹೇಳಿಕೆಗೆ ಕವಿ ಬಂದು ತಲುಪಿರುತ್ತಾನೆ. ಇನ್ನುಳಿದ ಕವಿಗಳ ಬಗ್ಗೆ ಹೆಚ್ಚಿಗೆ ಏನೂ ಹೇಳುವುದೂ ಸಾಧ್ಯವಿಲ್ಲ. ಇದು ಅವರ ನಿಜವಾದ ಬೆಲೆಯ ಬಗ್ಗೆ ಟೀಕೆಯಾಗಿರದೆ ಒಂದು ಸಾಮಾನ್ಯ ನೆಲೆಯನ್ನು ಸೂಚಿಸುವ ಕೇವಲ ಸಂಗ್ರಹ ರೂಪದ ಪ್ರಯತ್ನವೆಂದು ಭಾವಿಸಬೇಕು. ವಿಸ್ತಾರವಾದ ಪ್ರತಿಮೆಗಳನ್ನು ರೂಪಿಸುವ ಅಕಬರ ಅಲಿ, ವೈಯಕ್ತಿಕ ಪ್ರಾಮಾಣಿಕತೆಯ ಮೇಲೆ ಒತ್ತು ಕೊಡುವ ಶಾಂತರಸ, ಸೂಕ್ಷ್ಮವಾದ ಸಾಂಕೇತಿಕತೆಯ ಕೆ.ಎಸ್. ನಿಸಾರ್ ಅಹಮದ್, ಆತುರದ ಕಟುಭಾವನೆಯ, ವ್ಯಂಗ್ಯ ನೋಟದ ಆದರೆ ಕೆಲಮಟ್ಟಿಗೆ ಕಾಣ್ಕೆಯ ಸಾಮರ್ಥ್ಯ ಪಡೆದ ಚಂದ್ರಶೇಖರ ಪಾಟೀಲ, ಲೈಂಗಿಕ ಅಂತರ್ಭಾವದ ಹಾಗೂ ಪ್ರಾಚೀನ ಪುರಾಣ ಕಥೆಗಳನ್ನು ಆಧುನಿಕ ರೀತಿಗೆ ತಿರುಗಿಸುವ ಶಕ್ತಿಯುಳ್ಳ ಎಚ್.ಎಂ. ಚೆನ್ನಯ್ಯ, ಜಿ.ಎಸ್. ಸಿದ್ಧಲಿಂಗಯ್ಯ ತನ್ನ ಉದ್ದೇಶಕ್ಕೆ ತಕ್ಕಂತೆ ಭಾಷೆಯಲ್ಲಿ ಅನುಭವವನ್ನು ಅನ್ವೇಷಿಸುವ ಸಿದ್ಧಲಿಂಗ ಪಟ್ಟಣಶೆಟ್ಟಿ, ಹಲವಾರು ಸ್ತರಗಳಲ್ಲಿ ಅರ್ಥವನ್ನು ಆವಿಷ್ಕಾರಗೊಳಿಸುವ ಶಂಕರ ಮೊಕಾಶಿ(ಇವರು ಮೂಲ ಇಂಗ್ಲಿಷಿನಲ್ಲಿಯೂ ಕವಿತೆಗಳನ್ನು ರಚಿಸುತ್ತಾರೆ.) ಕಣ್ಣಿಗೆ ಬಡಿಯುವ ನುಡಿಚಿತ್ರಗಳ ದೇವೇಂದ್ರಕುಮಾರ ಹಕಾರಿ, ಮನುಷ್ಯನ ನಿರಾಸೆಯ ಬೇರುಗಳನ್ನು ಹತಾಶೆಯಿಂದ ಹುಡುಕುವ ಗಿರಡ್ಡಿ ಗೋವಿಂದ ರಾಜ, ಕಠೋರ ವಾಸ್ತವತೆಯಿಂದ ತೀವ್ರ ಭಾವಾವೇಶದ

ವರೆಗೆ ಸಂಚರಿಸುವ ವಿವಿಧ ಮುಖದ ಸಾಮರ್ಥ್ಯವುಳ್ಳ ಪಿ. ಲಂಕೇಶ, ಅನುಭವದ ಸಂದಿಗ್ಧತೆಯಲ್ಲಿ ಆಸಕ್ತಿ ಪಡೆದ ಸುಮತೀಂದ್ರ ನಾಡಿಗ, ತೀವ್ರ ಭಾವೋದ್ರೇಕವನ್ನು ರಭಸದ ರೂಪಕಗಳಲ್ಲಿ ಹೊರ ಹೊಮ್ಮಿಸುವ ಬುದ್ದಣ್ಣ ಹಿಂಗಮಿರೆ- ಈ ಎಲ್ಲ ಕವಿಗಳು ವಿವರವಾದ ಅಭ್ಯಾಸಕ್ಕೆ ಯೋಗ್ಯರಾಗಿದ್ದಾರೆ. ಅಸ್ಥಿರವಾದ ಸಂದರ್ಭದಲ್ಲಿ ಸಿಲುಕಿಕೊಂಡಿರುವ ಆಧುನಿಕ ಕನ್ನಡ ಕಾವ್ಯದ ಬಗ್ಗೆ ಭವಿಷ್ಯ ಹೇಳುವುದು ತುಂಬ ಗಂಡಾಂತರಕಾರಿಯಾದುದು. ಆದರೆ ಈ ಎಲ್ಲ ಹೊಸ ಕವಿಗಳಲ್ಲಿ ಚಂದ್ರಶೇಖರ ಕಂಬಾರ ಮನಸ್ಸಿನ ಮೇಲೆ ಹೆಚ್ಚು ಅಚ್ಚೊತ್ತಿ ನಿಲ್ಲುತ್ತಾರೆ. ಅವರ ಭಾಷಾ ಸಂಪತ್ತು ಆಳವಾಗಿದ್ದು ಅನುಭವಿಸುವ ಶಕ್ತಿಯೂ ಅಷ್ಟೇ ಆಳವಾಗಿದೆ. ಇವೆರಡೂ ಬಹುದಿವಸ ಬಾಳಬಲ್ಲ ಕಾವ್ಯದ ಮೂಲ ಸಾಮಗ್ರಿಯಾಗಿವೆ. ಜಾನಪದ ಸಂಪ್ರದಾಯ ಹಾಗೂ ಶೈಲಿಯಿಂದ ಕಂಬಾರರ ಕಾವ್ಯ ತುಂಬ ಪ್ರಭಾವಗೊಂಡಿದೆ.

ಈ ಸೀಮಿತವಾದ ಮುಕ್ತಾಯದ ಘಟ್ಟದಲ್ಲಿ ಇನ್ನು ಒಂದೆರಡು ವಿಷಯಗಳ ಬಗ್ಗೆ ಸಂಕ್ಷೇಪವಾಗಿಯಾದರೂ ಎರಡು ಮಾತು ಹೇಳಬೇಕಾಗಿದೆ. ಕನ್ನಡದ ಇತ್ತೀಚಿನ ಕಾವ್ಯದಲ್ಲಿ ಜಾನಪದ ರೂಪ ಹಾಗೂ ವಸ್ತುಗಳ ಕಡೆಗೆ, ಹಾಗೆಯೇ ಧರ್ಮನಿಷ್ಠ ಸಂಬಂಧಗಳತ್ತ ಮನಸ್ಸು ತಿರುಗಿಸುವ ಒಲವು ಕಂಡುಬರುತ್ತಿದೆ. ಜಾನಪದ ರೂಪವನ್ನು ಚೈತನ್ಯ ಪೂರ್ಣವಾಗಿ ಬಳಸಿಕೊಂಡಿರುವುದಕ್ಕೆ ಉತ್ತಮ ಉದಾಹರಣೆಯಾಗಿ ಇಮ್ರಾಪುರ ಅವರ ಕವಿತೆಗಳನ್ನು ನೋಡಬಹುದು. ಜಾನಪದದಂತೆಯೇ ಕಾಣಿಸಿಕೊಳ್ಳಲು ಅವರ ಕಾವ್ಯ ಪ್ರಜ್ಞಾಪೂರ್ವಕವಾಗಿ ಪ್ರಯತ್ನಿಸುತ್ತಿರುವಂತಿದೆ. ಈ ಬಗೆಯ ಕವಿತೆಗಳು ಒಂದು ಸಂಪ್ರದಾಯವಾಗಿ ಇನ್ನೂ ರೂಪಗೊಳ್ಳಬೇಕಾಗಿದೆ. ಈ ಸಂದರ್ಭದಲ್ಲಿ ನಮ್ಮ ಮನಸ್ಸಿನಲ್ಲಿರುವುದು 'ದಲಿತ' ಕಾವ್ಯ. ಭಾರತದ ಸಾಂಪ್ರದಾಯಿಕ ಸಾಮಾಜಿಕ ಶ್ರೇಣಿಯ ಎಲ್ಲ ಬಗೆಯ ಪ್ರಯೋಜನಗಳಿಗೆ ಹೊರತಾದ ಈ ಜನಾಂಗದ ಆಶೆ ಆಕಾಂಕ್ಷೆಗಳಿಗೆ, ನೋವು ನಿರಾಶೆಗಳಿಗೆ ದನಿಗೊಡಲು ಪ್ರಯತ್ನಿಸುವಂಥ ಕಾವ್ಯವಿದು. ಸಾಹಿತ್ಯಿಕ ಸಂಪ್ರದಾಯದಲ್ಲಿ ತೊಡಗಿಸಿಕೊಳ್ಳುವ ಫಲವೂ ಇವರಿಗೆ ಇದುವರೆಗೆ ದೊರೆತಿಲ್ಲ. ಇಂದು ದೇಶದಲ್ಲಿ ತಲೆಯೆತ್ತಿರುವ ಹೊಸ ಸಾಮಾಜಿಕ ಅರಿವಿನ ಸಂದರ್ಭದಲ್ಲಿ ದಲಿತ ಪಂಥದ ಕವಿಗಳು ಹೆಚ್ಚಿನ ಆವೇಗವನ್ನು ಪಡೆಯುವ ಸೂಚನೆಗಳಿದ್ದು, ಆಧುನಿಕ ಕನ್ನಡ ಕಾವ್ಯಸಂಪ್ರದಾಯ ಅವರ ಕೊಡುಗೆಯಿಂದ ಶ್ರೀಮಂತಗೊಳ್ಳುವ ಅವಕಾಶವಿದೆ.

ಈ ಪ್ರಸ್ತಾವನೆಯನ್ನು ಮುಗಿಸುವ ಮುನ್ನ ಒಟ್ಟಾರೆ ಕನ್ನಡ ಕಾವ್ಯದ ಸಾರಭೂತವಾದ ಗುಣಗಳನ್ನು ಅದರ ಬೆಳವಣಿಗೆಯ ಮಾದರಿ ಹಾಗೂ ಪ್ರಕ್ರಿಯೆಯನ್ನು ಗಮನಿಸಿ ಸಂಕ್ಷೇಪವಾಗಿ ಇಲ್ಲಿ ನಿರೂಪಿಸಬಹುದು. ಕನ್ನಡ ಕಾವ್ಯದ ಎದ್ದು ಕಾಣುವ ಮೊದಲ ಸತ್ವವೆಂದರೆ ಐತಿಹಾಸಕ ಸಂದರ್ಭಗಳ ಯಾವುದೇ ಆಹ್ವಾನವನ್ನು ಸ್ವೀಕರಿಸಬಲ್ಲ ಹಾಗೂ ಬದಲಾವಣೆಗೆ ಸಿದ್ಧಗೊಳ್ಳುವ ಕ್ರಿಯಾತ್ಮಕ ಒಲವು ಅದರ ಹರಿಗಡಿಯದ ಸಾಧನ ಸಂಪತ್ತಾಗಿದೆ. ಕನ್ನಡ ಕಾವ್ಯ ತನ್ನ ಮುನ್ನಡೆಯಲ್ಲಿ ಮಧ್ಯಕಾಲೀನ ಸಾಮಾಜಿಕ ಸಾಂಸ್ಕೃತಿಕ

ಕ್ರಾಂತಿಯ ಹಾಗೂ ಆಧುನಿಕ ಯುಗದ ಔದ್ಯಮಿಕ ಕ್ರಾಂತಿಯ ಆಹ್ವಾನವನ್ನು ಯಶಸ್ವಿಯಾಗಿ ಮತ್ತು ಸೃಜನಾತ್ಮಕವಾಗಿ ಅದು ಈಡೇರಿಸಿ ತೋರಿಸಿದೆ. ಎರಡನೆಯದಾಗಿ, ಈ ಕಾವ್ಯ ಕನ್ನಡ ಜನತೆಯ ಬದಲಾಗುತ್ತಿರುವ ಅಗತ್ಯಗಳಿಗೆ ಹಾಗೂ ಅಪೇಕ್ಷೆಗಳಿಗೆ ತಕ್ಕಂತೆ ಹೊಂದಿಕೊಂಡು ಬಂದಿರುವಂತೆಯೇ ಕೆಲವೊಂದು ಸಾರಭೂತವಾದ ಮೌಲ್ಯಗಳನ್ನು ಸುಭದ್ರವಾಗಿ ತನ್ನೊಡನೆ ಕಾಪಾಡಿಕೊಂಡು ಬಂದಿದೆ. ಆ ಎಲ್ಲ ಮೌಲ್ಯಗಳನ್ನು ಕುರಿತು ಇಲ್ಲಿ ವಿವರವಾಗಿ ನಿರೂಪಿಸುವುದು ಕಷ್ಟ. ಆದರೆ ಅವುಗಳ ಸಾರವನ್ನು ಸಂಕ್ಷಿಪ್ತವಾಗಿ ಹೀಗೆ ಹೇಳಬಹುದು. ವೈವಿಧ್ಯದ ಬಗ್ಗೆ ಸಹಿಷ್ಣುತೆ, ವಿದೇಶೀಯ ಪ್ರಭಾವಗಳಿಗೆ ಒಂದು ಬಗೆಯ ಸಾಹಸದ ಸ್ವಾಗತ, ಕರ್ನಾಟಕದ ಸಾಮಾನ್ಯ ಜನತೆಯ ಅದೃಷ್ಟದ ಬಗ್ಗೆ ಹಟತೊಟ್ಟು ಬದ್ಧವಾಗಿರುವುದು. ಈ ದೃಷ್ಟಿಯಿಂದ ನಿರೀಕ್ಷಿಸಿದಾಗ, ಕನ್ನಡ ಕಾವ್ಯದ ಭವಿಷ್ಯ ಅದರ ಭೂತ ಹಾಗೂ ವರ್ತಮಾನದಷ್ಟೇ ಉತ್ತೇಜಕ ಹಾಗೂ ಸೃಜನಾತ್ಮಕ ವಾಗಿರುವಲ್ಲಿ ಯಾವ ಸಂದೇಹವೂ ಇಲ್ಲ.

**'ಆಧುನಿಕ ಕನ್ನಡ ಕಾವ್ಯ'- ೧೯೭೬**
**(ಪ್ರಾತಿನಿಧಿಕ ಸಂಕಲನದ ಪ್ರಸ್ತಾವನೆ)**

೩೩

# ಬೇಂದ್ರೆ : ಕಾವ್ಯಭಾಷೆ ಮತ್ತು ಪ್ರತಿಮಾ ಯೋಜನೆ

ಕವಿತೆಯಲ್ಲಿ ಭಾಷೆಯನ್ನು ಒಂದು ಸೂತ್ರಕ್ಕನುಸರಿಸಿ ಪ್ರಯೋಗಿಸಿಲಾಗಿದೆ ಎಂದು ತೋರಿಕೆಗೆ ಅನಿಸಿದರೂ ನಿಜವಾದ ಕವಿತೆ ಇಂಥ ಪ್ರಯೋಗವನ್ನು ಉಲ್ಲಂಘಿಸಿರುತ್ತದೆ. ಅದರ ವಿಧಾನವನ್ನು ವಿವರಿಸುವದೂ ಎಷ್ಟೋ ಸಲ ಸಾಧ್ಯವಾಗುವುದಿಲ್ಲ. ಭಾಷೆಯ ವ್ಯಂಜಕ ಸಾಮರ್ಥ್ಯವನ್ನು ಸೂರೆಗೊಂಡ, ಪದಗಳನ್ನು ತಮಗೆ ಬೇಕಾದಂತೆ ಮಾರ್ಪಡಿಸಿಕೊಂಡ ಬೇಂದ್ರೆ ಕಾವ್ಯದ ವಿಷಯದಲ್ಲಂತೂ ಈ ಬಗೆಯ ಉಲ್ಲಂಘನೆ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತದೆ. ಇದುವರೆಗೆ ಬಂದಿರುವ ಬೇಂದ್ರೆ ಕಾವ್ಯದ ವಿಶ್ಲೇಷಣೆಯನ್ನು ಗಮನದಲ್ಲಿಟ್ಟುಕೊಂಡು ಬೇಂದ್ರೆ ಕಾವ್ಯಭಾಷೆ ಹಾಗೂ ಪ್ರತಿಮಾ ಯೋಜನೆಯನ್ನು ಕುರಿತು ಕೆಲವು ಮಾತುಗಳನ್ನು ಹೇಳಲು ಇಲ್ಲಿ ಪ್ರಯತ್ನಿಸಲಾಗಿದೆ.

ಶಿಷ್ಟ ಕನ್ನಡದಲ್ಲಿ ಕವಿತೆಗಳನ್ನು ಬರೆದಿದ್ದರೂ ಬೇಂದ್ರೆ ಕಾವ್ಯಭಾಷೆಯ ವೈಶಿಷ್ಟ್ಯ ಎದ್ದು ಕಾಣುವುದು ಉತ್ತರ ಕರ್ನಾಟಕದ ಜನಪದ ಉಪಭಾಷೆಯನ್ನು ಅವರು ಬಳಸಿಕೊಂಡ ರೀತಿಯಲ್ಲಿ. ಹೊಸಗನ್ನಡ ಕಾವ್ಯಕ್ಕೆ ಯಾವುದೇ ಸಿದ್ಧ ಭಾಷೆ ಇನ್ನೂ ರೂಪಗೊಂಡಿರದ ಸಂದರ್ಭದಲ್ಲಿ ಭಾಷೆಯ ಮಡಿವಂತಿಕೆಯಿಂದ ಹೊರಬಂದು, ಆಡು ನುಡಿಯನ್ನು, ಜನಪದ ಭಾಷೆಯನ್ನು ಕಾವ್ಯಕ್ಕೆ ಒಗ್ಗಿಸಿಕೊಂಡ, ಬಗ್ಗಿಸಿಕೊಂಡ ನಿರ್ಧಾರ ಹಾಗೂ ಅದರಲ್ಲಿ ಪಡೆದ ಕಣ್ಣು ಕುಕ್ಕುವಂಥ ಯಶಸ್ಸು ಕನ್ನಡ ಸಾಹಿತ್ಯದ ದೃಷ್ಟಿಯಿಂದ ಒಂದು ಐತಿಹಾಸಿಕವಾದ ಮಹತ್ವದ ಸಂಗತಿಯಾಗಿದೆ.

ಪ್ರತಿಯೊಬ್ಬ ಕವಿ ಪರಂಪರೆಯಿಂದ ಪ್ರಭಾವಿತನಾಗುವುದು ಅವನದೇ ಆದ ಆಯ್ಕೆಗನುಗುಣವಾಗಿಯೇ. ವಚನಕಾರರು, ರತ್ನಾಕರವರ್ಣಿ, ಲಕ್ಷ್ಮೀಶ, ಸರ್ವಜ್ಞ, ಪುರಂದರ, ಶರೀಫಸಾಹೇಬ ಮುಂತಾದ ಭಕ್ತಿ ನೆಲೆಯ ದೇಸೀ ಕವಿಗಳಿಂದ ಕನ್ನಡ ಕಾವ್ಯ ಪರಂಪರೆಯ ಅನೇಕ ಅಂಶಗಳನ್ನು ಸ್ವೀಕರಿಸಿದ ಬೇಂದ್ರೆಯವರು ಅವರ ಭಾಷೆಯ ಲಯಗಳನ್ನು ಅರಗಿಸಿಕೊಂಡು ಮಾರ್ಗ ದೇಸಿಗಳ ಒಡಂಬಡಿಕೆಯನ್ನು ಸಹಜವಾಗಿ ಸಾಧಿಸಿದ್ದಲ್ಲದೆ. ಕನ್ನಡದ ಜೀವಾಳವನ್ನು ಕಾವ್ಯದಲ್ಲಿ ಪುನರ್ನಿರ್ಮಿಸುತ್ತ ಸಾಂಸ್ಕೃತಿಕ ಪರಂಪರೆಗೆ ಹೊಸ ದಿಕ್ಕನ್ನು ತೋರಿದರು.

ಭಾಷೆಯ ಶಿಷ್ಟರೂಪ, ಆಡುಮಾತು, ಗ್ರಾಮ್ಯ ರೂಪಗಳಲ್ಲಿ ಕವಿ ಮಾಡಿಕೊಳ್ಳುವ ಆಯ್ಕೆ ಅಥವಾ ಅವೆಲ್ಲದರ ಸಂಯೋಜನೆ ಹಾಗೂ ಪ್ರತ್ಯೇಕ ಬಳಕೆಗಳಿಂದ ಕವಿಯು ರೂಢಿಸಿಕೊಳ್ಳುವ ಶೈಲಿ ಅವನ ಕಾವ್ಯದ ವಿಶಿಷ್ಟತೆಯನ್ನು ಗುರುತಿಸುವ ಒಂದು ಅಂಶವಾಗುತ್ತದೆ. ಒಂದೇ ಕವಿತೆಯಲ್ಲಿ ಭಾಷೆಯನ್ನು ಬೇರೆ ಬೇರೆ ಸ್ತರಗಳಲ್ಲಿ ದುಡಿಸಿಕೊಳ್ಳುವುದು ಬೇಂದ್ರೆ ಕಾವ್ಯದ ಒಂದು ವಿಶೇಷ ಲಕ್ಷಣವಾಗಿದೆ. ಬೇಂದ್ರೆಯವರು ಆಡು ಭಾಷೆಯ ಮೂಲಕ್ಕಿರುವ ಕಾವ್ಯ ಪ್ರಜ್ಞೆಯನ್ನು ಉಪಯೋಗಿಸಿಕೊಂಡು ಹೊಸ ಕಾವ್ಯವನ್ನು ಸೃಷ್ಟಿಸಿರುವುದು ಅಪೂರ್ವವಾದದ್ದು ಎಂದಿರುವ ಕುರ್ತಕೋಟಿಯವರು ಶಬ್ದ, ಛಂದ, ನಾದ, ಧ್ವನಿ ಇವು ನಾಲ್ಕು ಕೂಡಿಕೊಂಡು ಒಂದು ಸ್ವತಂತ್ರ ರಚನೆಯಾಗಿ ಅವರ ಭಾವಗೀತದ ಶಿಲ್ಪ ರೂಪುಗೊಂಡಿರುವುದನ್ನು ಅವರು ಸರಿಯಾಗಿಯೇ ಗುರುತಿಸಿದ್ದಾರೆ. ಈ ಶಿಲ್ಪ ಕೌಶಲದಿಂದ ಕಾವ್ಯ ರೂಪದ ಸಾಧ್ಯತೆಗಳನ್ನು ಅವರು ವಿಸ್ತರಿಸಿದ್ದಲ್ಲದೆ ಅದರಲ್ಲಿ ತಮ್ಮ ವೈಯಕ್ತಿಕತೆಯನ್ನು ಅನನ್ಯವಾಗಿ ಉಳಿಸಿಕೊಂಡರು.

ಕಾವ್ಯಭಾಷೆಗೆ ವೈವಿಧ್ಯವನ್ನು ತರಲು ಬೇಂದ್ರೆ ಸಮಕಾಲಿಕವಾದ ಪ್ರಾದೇಶಿಕ ಪ್ರಭೇದಗಳನ್ನು ಉಪಯೋಗಿಸುತ್ತಾರೆ. ಈ ಸಂದರ್ಭದಲ್ಲಿ ಜನಪದರ ಭಾಷೆ ಮತ್ತು ಜಾನಪದ ಭಾಷೆಗಳ ನಡುವಿರುವ ವ್ಯತ್ಯಾಸವನ್ನು ಸ್ಪಷ್ಟಗೊಳಿಸಿಕೊಳ್ಳಬೇಕು. ಯಾವುದೇ ಉಪಭಾಷಾ ಪ್ರದೇಶದಲ್ಲಿ ದಿನನಿತ್ಯದ ವ್ಯವಹಾರಕ್ಕಾಗಿ ಬಳಸುವ ಮಾತು ಜನಪದರ ಭಾಷೆ, ಆಡುಮಾತು. ಆದರೆ ಜಾನಪದ ಎಂದಾಗ ಗ್ರಾಮೀಣತೆ, ಗೇಯತೆ, ಸರಳತೆ ಮುಂತಾದವು ಭಾಷೆಯ ಒಡಲಿನಲ್ಲಿಯೇ ಸೇರಿಕೊಂಡುಬರುತ್ತವೆ. ಆಧುನಿಕ ಸಂವೇದನೆಯಿಂದ ಕೂಡಿದ 'ನೀ ಹೀಂಗ ನೋಡಬ್ಯಾಡ ನನ್ನ' 'ನಾದಲೀಲೆ' ಮುಂತಾದ ಕವಿತೆಗಳ ಹೊರಮೈ ಜಾನಪದವೆಂಬಂತೆ ಕಂಡುಬಂದರೂ ಅವುಗಳ ಹಿಂದಿರುವ ಸಂವೇದನೆ, ಚಿಂತನಾಲಹರಿ ಜಾನಪದವಲ್ಲ. ಇಂಥ ಸಂದರ್ಭದಲ್ಲಿ ಆ ಭಾಷೆಯನ್ನು ಮತ್ತೊಂದು ಹಂತಕ್ಕೆ ಏರಿಸಿ ಅದಕ್ಕೆ ಬೇರೆ ಬಗೆಯ ನಿಯೋಗಗಳನ್ನು ನೀಡುತ್ತಾರೆ. ಬೇಂದ್ರೆಯವರು ಪಂಪನ ಹಾಗೆ ಮಾರ್ಗದೇಶಿಗಳ ಸಮನ್ವಯ ಸಾಧಿಸುವುದು ಇಂಥಲ್ಲಿ. ಬೇಂದ್ರೆಯವರಲ್ಲಿ ಜಾನಪದ ಭಾಷೆ ಕುರ್ತಕೋಟಿಯವರು ಹೇಳಿದಂತೆ ಒಂದು ನಿಶ್ಚಿತವಾದ ಉದ್ದೇಶಕ್ಕೆ ಉಪಯೋಗಿಸಲ್ಪಟ್ಟು ತನ್ನದೇ ಆದ ಮೌಲ್ಯ ಪ್ರಪಂಚವನ್ನು ನಿರ್ಮಿಸುತ್ತದೆ.

೨

ಬೇಂದ್ರೆಯವರ ಕಾವ್ಯಶೈಲಿಯ ವೈವಿಧ್ಯಕ್ಕೆ ಮೂಲ ಕಾರಣಗಳಲ್ಲಿ ಒಂದು ಲಯದ ಬಗ್ಗೆ ಅವರು ತಳೆದ ನಿಲುವು. ನಿಯತವಾದ ಮಾತ್ರಾ ಲಯಕ್ಕೇ ಅಂಟಿಕೊಳ್ಳದೆ ನಾದದ ವಿನ್ಯಾಸಗಳನ್ನು ವ್ಯಾಪಕವಾಗಿ ಬಳಸಿಕೊಳ್ಳುವ ಸ್ವಾತಂತ್ರ್ಯವಿರುವ ಅಂಶ ಲಯವನ್ನು ಅವರು ಸಾಕಷ್ಟು ಉಪಯೋಗಿಸಿದರು. ಅಲ್ಲದೆ, ಛಂದೋರೂಪದ ಯಾವ ಕಟ್ಟುಪಾಡಿಗೂ ನಿಲುಕದ ಪ್ರತಿಯೊಂದು ಪದ್ಯಕ್ಕೂ ಅದರದೇ ಆದ ಬಂಧವಿರುವ ಹಲವಾರು

ಕವಿತೆಗಳನ್ನು ಬೇಂದ್ರೆಯವರು ಬರೆದಿದ್ದಾರೆ. "ಯಾವ ಛಂದದಲ್ಲಿ ಸ್ವಚ್ಛಂದತೆಯ ಸೂಚನೆಯಿಲ್ಲವೊ ಅದು ಛಂದವಲ್ಲ 'ಬಂಧ' " ಎಂದು ಅವರು ಹೇಳಿದ್ದುಂಟು. 'ಕುಣಿಯೋಣು ಬಾರ', 'ಪಾತರಗಿತ್ತಿಪಕ್ಕ', 'ಸಚ್ಚಿದಾನಂದ', 'ಜೋಗಿ', 'ನಾದಲೀಲೆ' ಮೊದಲಾದವನ್ನು ಇದಕ್ಕೆ ಉದಾಹರಿಸಬಹುದು. ಈ ಬಗೆಯ ಬಂಧವನ್ನು ಅವರು ಮತ್ತೆ ಪುನರಾವರ್ತನೆ ಮಾಡಲಿಲ್ಲ ಎನ್ನುವುದು ಅವರ ಸ್ವೋಪಜ್ಞತೆಗೆ ಸಾಕ್ಷಿ. ಭಾಷೆಯ ಇತರ ನೆಲೆಗಳನ್ನು ಅವರು ಅಷ್ಟೇ ವ್ಯಾಪಕವಾಗಿ ದುಡಿಸಿಕೊಳ್ಳುತ್ತಾರೆ. ವರ್ಣನೆ, ಸಂಭಾಷಣೆ, ಆಲೋಚನೆಗಳೆಂಬ ಸಾಧ್ಯತೆಗಳಿಗೆ ತಕ್ಕಂತೆ ನಾಟಕೀಯವಾಗಿ ಕಾವ್ಯ ಭಾಷೆಯ ಸ್ವರೂಪವನ್ನು ಬದಲಾಯಿಸಿಕೊಳ್ಳುತ್ತಾರೆ. ಈ ಕಾರ್ಯದಲ್ಲಿ ಹಲ ವಿಧದ ಭಾಷಾ ಸಂಯೋಜನೆ ತುಂಬ ನೆರವಾಗುತ್ತದೆ. ಅದನ್ನು ಪ್ರಯೋಗಶೀಲವಾಗಿ ಬಳಸಿದ ಅವರ ವೈವಿಧ್ಯಮಯ ಶೈಲಿಗೆ ಕೆಲವನ್ನು ಮಾತ್ರ ಇಲ್ಲಿ ಉದಾಹರಿಸಬಹುದು:

೧. ಪ್ರಾದೇಶಿಕವಲ್ಲದ ಶಿಷ್ಟ ಭಾಷೆಯ ಲಯ ಬದ್ಧವಾದ ಸ್ವಗತದ ಧಾಟಿಗೆ-

ಯಾಕೊ ಕಾಣೆ
ರುದ್ರವೀಣೆ
ಮಿಡಿಯುತಿರುವುದು ('ಗರಿ' ಪು. ೧೧೫)

೨. ಗೇಯತೆಗೆ ಪ್ರಾಧಾನ್ಯವಿತ್ತ, ಸಂಭಾಷಣ ರೂಪದ ಪ್ರಾದೇಶಿಕ ಶೈಲಿಗೆ-

ಸುತ್ತೆಲ್ಲ ಕತ್ತಲಾ, ಒಳಗ ಬೆಳಗತದ ದೀಪಾ
ಬಾ ಸಮೀಪಾ ('ನಾದಲೀಲೆ' ಪು. ೪೬)

೩. ಹತಾಶೆಗೊಂಡ ಹೆಣ್ಣಿನ ಅಂತರಂಗ ನಿವೇದನೆಯ ಗ್ರಾಮ್ಯವಾದ ಆಡುಮಾತಿನ ಪ್ರಾದೇಶಿಕ ಶೈಲಿಗೆ-

ಹುಟ್ಟಾ ಯಾಂವಾ ನಗೀ ಕ್ಯಾದಗಿ ಮುಡಿಸಿಕೊಂಡಾವಾ
ಕಂಡ ಹೆಣ್ಣಿಲೇ ಪ್ರೀತಿ ವೀಳ್ಯೆ ಮಡಿಚಿ ಕೊಂಡಾವಾ
('ಸಖೀಗೀತ' ಪು. ೯೫)

೪. ಪ್ರಾದೇಶಿಕತೆ ಹಾಗೂ ಗೇಯತೆಯನ್ನೊಳಗೊಂಡ ಆಲೋಚನಾ ಪ್ರಧಾನವಾದ ನಾಟಕೀಯ ಸ್ವಗತದ ಧಾಟಿ-

ನೋಡ್ ನೋಡ್ತ ದಿನಮಾನಾ, ಆಡಾಡ್ತಾ ಆಯುಷ್ಯಾ
ನಡದಃದ ನಡದಃದ ನಡದಃದ ('ಗರಿ' ಪು. ೯೮)

೫. ಗೇಯತೆಯಿಲ್ಲದ, ನಡುಗನ್ನಡದ ಛಾಯೆಯುಳ್ಳ, ಶಿಷ್ಟ ಭಾಷೆಯಲ್ಲಿ ಕವಿಯ ಆಲೋಚನಾ ನಿರುಪಣೆಗೆ

ಹುಳು ಹೊಕ್ಕ ಹೂವನೊಳಹೊಕ್ಕು ಅರಿತವರುಂಟೆ
ಮಗಮಗಿಸಿ ಹೋದ ನಗೆ ಹೂವ ಮರೆತವರುಂಟೆ
('ಉಯ್ಯಾಲೆ' ಪು. ೧೯)

ಇಂಥ ನೂರಾರು ಉದಾಹರಣೆಗಳನ್ನು ನಾವು ಕೊಡಬಹುದು.

ಬೇಂದ್ರೆಯವರಲ್ಲಿ ಪ್ರಕೃತಿಯು ಒಂದು ಭಾಷೆಯಂತೆ ಕೆಲಸ ಮಾಡುತ್ತದೆ ಎನ್ನುವ ಎಚ್.ಎಸ್. ರಾಘವೇಂದ್ರರಾವ್ 'ಸಖೀಗೀತ'ದ ಇಡೀ ಋತುವರ್ಣನೆಯನ್ನು ಉದಾಹರಿಸುತ್ತಾರೆ:

ಮಳೆಯಾಕೆ, ಚಳಿಯಾಕೆ, ಭೂಮಿಯ ಬೆಳೆಯಾಕೆ
ಬಿಸಿಲಾಕೆ, ನನ್ನಾಕೆ ನೆರೆಯಾದಳು.
ಇರುಳವಳು, ಹಗಲವಳು, ಬೆಳಕು-ನೆರಳಿನವಳು
ಬೆಳೆದಿಂಗಳವಳು ನನ್ನವಳಾದಳು.

ಪ್ರಕೃತಿಯ ಘಟನೆಗಳಲ್ಲಿ ಕಾವ್ಯ ಸೃಷ್ಟಿಯ ಪರಿಕರಗಳನ್ನೆಲ್ಲ ಬೇಂದ್ರೆಯವರು ಕಾಣುತ್ತಾರೆ.

ರೂಪಗಳಿಗೆ, ಚಿತ್ರಗಳಿಗೆ
ಉಪಮೆಗಳಿಗೆ ಗಣಿಯಿದು.

ರಸಾನುಭವದಲ್ಲಿ ಮುಳುಗಿದಾಗ ಬೇಂದ್ರೆಯವರ ಮನಸ್ಸಿನಲ್ಲಿ ಮೊದಲು ಹುಟ್ಟುವುದು ನಾದ. ಬಾಷೆಯ ನಾದಗುಣವನ್ನು ಅವರ ಹಾಗೆ ನಾದಿದವರು ವಿರಳ. ಈ ನಾದ ಗುಣ ಲಯದ ಕಲ್ಪನೆಗಿಂತ ಭಿನ್ನವಾದದ್ದು ಎಂಬುದನ್ನು ಗಮನಿಸಬೇಕು. ಅರ್ಥರಹಿತ ಧ್ವನಿಸಂಯೋಜನೆ, ಹಾಗೂ ಅರ್ಥಸಹಿತ ಶಬ್ದಜಾಲ ಎರಡೂ 'ಮಾತು ಮಾತು ಮಥಿಸಿ ಬಂದ ನಾದದ ನವನೀತ'ವಾಗಿ ಪ್ರತಿಯೊಂದು ಅಕ್ಷರವೂ ಶಬ್ದವೂ ನಾದದ ಉದ್ದೀಪಕತೆಗಾಗಿಯೇ ಮೆಲುಕು ಹಾಕುವಂತಿರುತ್ತವೆ.

ಅಂತರಂಗದಾ ಮೃದಂಗ ಅಂತು ತೋಂತನಾನಾ-ಎಂಬುದಾಗಲಿ
ಏಲಾವನ ಲವಲೀಬನ ಲವಂಗ ಬನಗಳಲಿ

ಇವನ್ನು ಉದಾಹರಿಸಬಹುದು. ನಾದವೇ ಅರ್ಥವನ್ನು ಕೈ ಹಿಡಿದು ನಡೆಸುವುದಕ್ಕೆ 'ನೋ', 'ನೊಣವೊ? ಅಣುವೊ? ಗುಣುಗುಣವೊ' ಎಂಬ ಪದ್ಯ ನೋಡಬಹುದು. ಈ ಬಗೆಯ ಕವಿತೆಗಳ ಚಲನೆಯನ್ನು ಬೇಂದ್ರೆಯವರ ಸಾಲನ್ನೇ ಉದಾಹರಿಸಿ ಹೇಳುವುದಾದರೆ-

'ಜುಮ್ ಜುಮು ರುಮುಜುಮು ಗುಂಗುಣುದುಮುದುಮು
ನಾದದ ನದಿಯೊಂದು ನಡೆಧಾಂಗ'

-ಇರುತ್ತದೆ. ಇಲ್ಲಿ ಬರುವ ನಾದದ ಪ್ರತಿಮೆ ಕವಿಯ ಅಸಾಧಾರಣ ಪ್ರತಿಭೆಗೆ ಮಾತ್ರ ಹೊಳೆಯುವಂಥದು.

ಬೇಂದ್ರೆಯವರ ಕಾವ್ಯ ಭಾಷೆಯ ಇನ್ನೆರಡು ಪ್ರಮುಖ ಲಕ್ಷಣಗಳೆಂದರೆ, ಪ್ರಾಸ ಹಾಗೂ ಶ್ಲೇಷೆಯ ಬಗೆಗಿನ ಅವರ ವಿಶೇಷವಾದ ಒಲವು. ಪ್ರಾಸ ಇವರ ಕವಿತೆಗಳಲ್ಲಿ ಅಲಂಕಾರ ಮಾತ್ರವಾಗಿರದೆ ಕಾವ್ಯದ ಆಂತರಿಕ ಅಗತ್ಯವಾಗಿ ಬರುತ್ತದೆ. ಕೆ.ವಿ. ತಿರುಮಲೇಶ ಸರಿಯಾಗಿಯೇ ಹೇಳಿರುವಂತೆ "ಪ್ರಾಸಗಳನ್ನು ಜೋಡಿಸುತ್ತ ಹೋದಂತೆ ಅವರು ನಾದ ಲೋಕದ ಮಾಂತ್ರಿಕತೆ ಮತ್ತು ಅರ್ಥದ ಜಗತ್ತಿನ ಕೌತುಕಗಳೆರಡನ್ನೂ ಮನಗಾಣಿಸುತ್ತಾರೆ". ಈ ಮೊದಲು ಬೇರೆ ಕಾರಣಗಳಿಗಾಗಿ ನಾನು ಉದಾಹರಿಸಿರುವ

ಸಾಲುಗಳಲ್ಲಿಯೇ ಈ ಅಂಶವೂ ಸೇರಿರುವುದರಿಂದ ಪ್ರತ್ಯೇಕವಾಗಿ ಉದಾಹರಿಸುವ ಅಗತ್ಯವಿಲ್ಲ. ಈ ಪ್ರಾಸ ಪ್ರಿಯತೆ ಒಮ್ಮೊಮ್ಮೆ ಅತಿಯಾದಾಗ ಮಾತ್ರ ಅಸ್ಪಷ್ಟತೆಗೆ ಎಡೆಗೊಟ್ಟುದೂ ಉಂಟು. ಕೊನೆ ಕೊನೆಗೆ 'ಬಾಲಬೋಧೆ'ಯ ಹೊತ್ತಿಗೆ ಕವಿಗೆ ಪ್ರಾಸವೂ ಬೇಸರವಾಯಿತು.

ಪ್ರಾಸವನು ಹೊಸೆದು ಹೊಸದು ಏನು ಆತು?
ಧ್ಯಾನಾ ಮಾಡು, ಕೂಡು ದಿನ ರಾತ್ರಿ

ಆದರೆ ಕವಿತಾರಚನೆಯನ್ನು ಭಾಷೆ ಅಥವಾ ಪದಗಳ ಸಂಗಡ ಆಡುವ ಆಟ ಎಂದು ಬೇಂದ್ರೆಯವರು ತಿಳಿದಿದ್ದರಿಂದ ಶ್ಲೇಷೆಯ ಬಗೆಗಿನ ಅವರ ಆಸಕ್ತಿ ವಿಶಿಷ್ಟವಾದದ್ದೆಂದೇ ಹೇಳಬೇಕು. ಒಂದು ಪದಕ್ಕಿರುವ ಎರಡು ಅರ್ಥಗಳು ಮಾತ್ರವಲ್ಲ, ಒಂದೇ ಪದವನ್ನು ಬೇರೆ ಬೇರೆ ಅರ್ಥಗಳಲ್ಲಿ ಬಳಸುವ ಮೂಲಕ ಶ್ಲೇಷೆಯ ಹೊಸದೊಂದು ಸಾಧ್ಯತೆಯನ್ನು ಅವರು ಕಂಡುಕೊಳ್ಳುತ್ತಾರೆ. ಈ ಸಾಲುಗಳನ್ನು ನೋಡಿ:

೧. ಸ್ತೂಲಗಳು ಮೂವತ್ತು ಮೂರು ಕೋಟಿ.
೨. ಸಾವಿರದ ಮನೆಗಳಲ್ಲಿ ನಿನಗೆ ಮನೆಯ ಮಾಡಿದೆ.
೩. ಕಂಡವರಿಗೆಲ್ಲೊ ಕಂಡವರಿಗಷ್ಟೆ ತಿಳಿದಿ೨ದ ಇದರ ಬೆಲೆಯು

ಬೇಂದ್ರೇನ ಗೋಳು ಅದು ಹೋಳು ಹೋಳು ಪಡುವುದಷ್ಟೂ ಪಾಡು ಆಗಲಿಲ್ಲ.

'ಕಥೆಯಾದಳು ಹುಡುಗಿ' ಕವಿತೆಯಲ್ಲಿ ಕವಿ ಉದ್ದಕ್ಕೂ ಶ್ಲೇಷೆಯನ್ನು ಬಳಸಿಕೊಳ್ಳುತ್ತ ಹೋಗುತ್ತಾರೆ.

೩

ಬೇಂದ್ರೆ ಕಾವ್ಯದಲ್ಲಿ ಪ್ರತಿಮಾ ಯೋಜನೆಯನ್ನು ಕುರಿತು ಎರಡು ಮಾತು. ಕವಿಯ ಭಾವಾಭಿವ್ಯಕ್ತಿ ನಿರ್ದಿಷ್ಟವಾದ ಶಬ್ದ ಚಿತ್ರಗಳನ್ನು ಪಡೆದಾಗ ಅದನ್ನು ಕಾವ್ಯ ಪ್ರತಿಮೆ poetic image ಎಂದು ಕರೆಯಬಹುದು. ಬೇಂದ್ರೆಯವರ ಕಾವ್ಯಭಾಷೆಯ ರೂಪಕ ಶಕ್ತಿ ವಿನೂತನವಾದ ಪ್ರತಿಮಾ ಸೃಷ್ಟಿಗೂ ನೆಲೆಯಾಗಿದ್ದು ಅದು ಹೆಚ್ಚು ಧ್ವನಿಪೂರ್ಣವೂ ಆಗಿದೆ. "ಈ ಪ್ರತಿಮೆಗಳ ಮೂಲಕ ಕಾವ್ಯಕ್ಕೆ ಒಂದು ವಿಶಿಷ್ಟ ರೀತಿಯ ಇಂದ್ರಿಯ ಗಮ್ಯವಾದ ಆಯಾಮ ಅಥವಾ ಅವಕಾಶ ನಿರ್ಮಾಣವಾಗುತ್ತದೆ, ಹಾಗೂ ಕಾವ್ಯಾರ್ಥವು ಈ ಅವಕಾಶದಲ್ಲಿ ಬೆಳೆಯುತ್ತ ಹೋಗುತ್ತದೆ".

ಬೇಂದ್ರೆಯವರ ಕಾವ್ಯಪ್ರತಿಮೆಗಳ ಒಂದು ಮುಖ್ಯ ಲಕ್ಷಣ, ಅವು ಕೆಲವು ಸಂದರ್ಭಗಳಲ್ಲಿ ಕವಿಯ ವ್ಯಕ್ತಿತ್ವದೊಡನೆ ಹೊಂದಿರುವ ಅವಿನಾಸಂಬಂಧ. ಉದಾಹರಣೆಗೆ 'ಮಲ್ಲಾಡದ ಗಿಣಿ', 'ನಿರ್ಭಯ', 'ಶುಭನುಡಿಯೆ ಶಕುನದ ಹಕ್ಕಿ' -ಇವು ಕವಿಯ ವಿವಿಧ ಭಾವಸ್ಥಿತಿಗಳಿಗೆ ಒಡ್ಡಿದ ಪ್ರತಿಮೆಗಳು. ವ್ಯಕ್ತಿನಿಷ್ಠವಾದರೂ ವಸ್ತುನಿಷ್ಠವಾಗಿ, ನಾಟಕೀಯವಾಗಿ ಹೇಳುವ ಅವಕಾಶವನ್ನು ಅವು ಪಡೆದುಕೊಂಡಿವೆ. ಭಾವ ಸಂದರ್ಭದಲ್ಲಿ ಕವಿಯೇ ಸೂಚಿಸಿರುವಂತೆ 'ನಿಗಿನಿಗಿ ಮುಗಿಲು' ಕವಿತೆ ಜೀವನದೊಳಗಿನ ಪ್ರಖರತೆ,

ಅದರಿಂದ ಬರಲಿರುವ ಕರುಣಾವರ್ಷ -ಈ ರಮ್ಯತೆಗೆ ಒಡ್ಡಿದ ನಿಸರ್ಗ ಪ್ರತಿಮೆಯಾಗಿದೆ. ಹಾಗೆಯೇ 'ಪಾರಿಜಾತ' ಕವನ ದಿವ್ಯ ಜೀವನದ ಅಭೀಪ್ಸೆಯ ಕುರುಹು ಎಂದು ಕವಿ ಸೂಚಿಸಿದ್ದಾರೆ. ಬದುಕಿನಲ್ಲಿ ಮಿಂಚಿ ಮಾಯವಾಗುವ ಸತ್ಯಕ್ಕೆ ಒಡ್ಡಿದ ಪ್ರತಿಮೆಯಾಗಿ 'ಚಿಗರೆ' ಕವಿತೆಯನ್ನು ನೋಡಬಹುದು. 'ಕರಡೀ ಕುಣಿತ'ದ ಇಡೀ ಕವಿತೆಯಲ್ಲಿ ವ್ಯಾಪಿಸಿರುವ ಸಮರ್ಥವಾದ ಪ್ರತಿಮೆಗಳು ಐಂದ್ರಿಯಕ ಅನುಭವಗಳಾಗುವುದರ ಜೊತೆಗೆ ಬೇರೊಂದು ಹಂತದಲ್ಲಿ ಶೋಷಣೆಯನ್ನೂ ದಾಸ್ಯವನ್ನೂ ಧ್ವನಿಸುತ್ತವೆ.

'ಕುಣಿಯಲೇ ಮಗನೆ ನೀ' ಅನ್ನೊದೊಂದೇ ತಡ
ತನ್ನನ ತಾನ್ನನ ತಂದ್ನಾನ
ಮುದ್ದು ಕೂಸಿನ ಹಾಗೆ ಮುಸುಮುಸು ಮಾಡುತ್ತ
ಕುಣಿದಾನ ಕುಣಿತ್ಕವ ಛಂದಾನ
ಹೊಟ್ಟೆಗಿಲ್ಲದವರ ಹೊಟ್ಟೆಗೆ ಹಾಕಲು
ನಡೆದಾನ ಪಡೆದಾನ ಬಂಧಾನ
'ಕುಣಿಸುವವರ ಹೊಟ್ಟೆ ತಣ್ಣಗಾಗಲಿ' ಎಂದು
ಮುಗಿಲಿಗೆ ಕೈಮುಗಿದು ನಿಂದಾನ
ಮನಬಲ್ಲ ಮಾನವ ಕುಣಿದಾನ ಕುಣಿಸ್ಯಾನ
ಪ್ರಾಣದ ಈ ಪ್ರಾಣಿ ಹಿಂಡ್ಯಾನ
ಕರಡೀಯ ಹೆಸರಿಲೆ ಚರಿತಾರ್ಥನಡಿಸ್ಯಾನ
ಪರಮಾರ್ಥ ಎಂಬಂತೆ ಬಂದಾನ

'ಬೇಂದ್ರೆಯವರ ಸಂವೇದ ಭಾವ ಬುದ್ಧಿಗಳ ಸಂಯೋಗದಿಂದ ರೂಪಿತ'ವಾದ ದ್ದೆನ್ನುವುದನ್ನು ಇಂಥಲ್ಲಿ ಮನಗಾಣಬಹುದು. ಪ್ರತಿಮಾವಿಧಾನವನ್ನು ಆಧ್ಯಾತ್ಮಿಕ ಅನುಭವಗಳಿಗೆ ಆಕಾರ ಕೊಡುವಲ್ಲಿಯೂ ಅದೇ ಬಗೆಯ ಪರಿಣತಿ ಕಂಡುಬರುತ್ತದೆ. ಉದಾಹರಣೆಗೆ 'ಹೃದಯ ಸಮುದ್ರ':

ಬಂಗಾರ ನೀರ ಕಡಲಾಚೆಗೀಚೆಗಿದೆ ನೀಲ ನೀಲ ತೀರಾ
ಮಿಂಚು ಬಳಗ ತೆರೆತೆರೆಗಳಾಗಿ ಅಲೆಯುವವು ಪುಟ್ಟಪೂರಾ

"ಅರವಿಂದರ ತತ್ವಜ್ಞಾನದಲ್ಲಿ ದೊರೆತ ಒಂದು ಹೊಸ ಅನುಭವ ಕ್ಷೇತ್ರದ ಶೋಧದಿಂದ ಉಂಟಾದ ರೋಮಾಂಚಕ ಅನುಭವ ಇಲ್ಲಿದೆ" ಎಂದಿರುವ ಕುರ್ತಕೋಟಿಯವರು ಈ ಹೊಸ ಅನುಭವದ ಆಘಾತದಿಂದ ಮನಸ್ಸಿನಲ್ಲಿ ಲಯಬದ್ಧವಾದ ಗೊಂದಲ ವುಂಟಾಗಿರುವುದನ್ನು ಸೂಚಿಸುತ್ತಾರೆ.

ಚರಮಗೀತೆಗಳಲ್ಲಿ ಸಾವಿನ ಅನುಭವವನ್ನು ಅರ್ಥೈಸಿಕೊಳ್ಳುತ್ತ ಹೋಗುವ ಬಗೆ ಅನುಭವ ವೇದ್ಯವಾದ ಪ್ರತಿಮಾ ಸೃಷ್ಟಿಗೆ ಕಾರಣವಾಗುತ್ತದೆ. 'ಪಾಡು' ಗೀತೆಯಲ್ಲಿ-

ಮುತ್ತಿಗಾಗಿಯೊ ಹಾಲಿಗಾಗಿಯೊ ನೀರ ಸೇರಿದೆ ಸಾರಸಾ
ಏನು ಹವಣಿಸಿ ನಿನಗೆ ತಿನಿಸಿದೆ ನೆಲದೆದೆಯ ಜ್ವಾಲಾರಸ
ಮತ್ತೆ ಕೈಲಾಸಕ್ಕೆ ಹಾರಿದೆ ಇನ್ನು ನೋಟಕು ಸಿಕ್ಕೆಯಾ?
ಬಿದ್ದ ಪುಚ್ಚಗಳಲ್ಲಿ ಹುಡುಕುವೆ ಹಾರಿ ಹೋಗುವ ಹಕ್ಕಿಯಾ.

ಕಾವ್ಯ ವಿಕಾಸದ ಬೇರೆ ಬೇರೆ ಹಂತಗಳಲ್ಲಿ ಕೆಲವು ಪ್ರತಿಮೆಗಳು ಬೆಳವಣಿಗೆ ಪಡೆಯುತ್ತ ಸಾಗಿರುವುದುಂಟು. 'ಅನ್ನ'ದ ಪ್ರತಿಮೆ ಬೇಂದ್ರೆಯವರಲ್ಲಿ 'ತುತ್ತಿನ ಚೀಲ' 'ಅನ್ನಾವತಾರ' 'ಯಜ್ಞ' 'ಅನ್ನಯಜ್ಞ' 'ಅನ್ನಬಕಾಸುರ ರಾಜ್ಯದಲ್ಲಿ' ಮುಂತಾದ ಕವಿತೆಗಳಲ್ಲಿ ವಿಕಸನಶೀಲವಾಗಿ ಬಂದಿರುವುದು ಇದಕ್ಕೆ ನಿದರ್ಶನವಾಗಿದೆ. ಹಾಗೆಯೇ ಚಲನಶೀಲ ಪ್ರತಿಮೆಗೆ 'ಸಂಜೀಯ ಜಾವಿಗೆ' ಕವಿತೆ ನೋಡಬಹುದು:

ತಲಿ ಮ್ಯಾಲೆ ಬಿಂದಿಗೆ | ಕಾಲಾಗ ಅಂದಿಗೆ
ಸಂಜೀಯ ಜಾವಿಗೆ | ಹೋಗಿದ್ದೆ ಬಾವಿಗೆ | ತುಂತುಮುಕು ತುಂಬಿದೆ |
ಬಿಂದೀಗೆ ಅಂತಿದೆ | ಝುಣ್ ಝುಣ್ ಅಂದಿಗೆ | ಅಂದಾವ ಹೊಂದೀಗೆ ||

ಇತ್ಯಾದಿ. ಈ ಕವಿಯ ಪ್ರತಿಭೆಯ ದ್ಯೋತಕವಾಗಿ ಇನ್ನೊಂದು ಪ್ರತಿಮೆಯನ್ನು ಉದಾಹರಿಸಲೇಬೇಕು. ಹೆಂಡತಿಯ ಮುತ್ತೈದೆ ಸಾವನ್ನು ತವರುಮನೆಗೆ ಹೋಗುವ ಸಂಭ್ರಮದಂತೆ ಚಿತ್ರಿಸುವಾಗ ಭಾವನೆಗಳ ಅದ್ಭುತವಾದ ನಿಯಂತ್ರಣದಿಂದ ಅನನ್ಯವಾದ ರೀತಿಯಲ್ಲಿ ಕರುಣರಸದ ಅನುಭವವಾಗಿ ಬಿಡುತ್ತದೆ.

ತವರು ಮನೆಗೆ ಹೊರಡೋ
ಸಡಗರವೇ ಸಡಗರ.
ಮಲ್ಲೀಗಿ ಮಾಲೆ ತುರುಬಿಗೆ
ಅರಿಶಿಣಾ ಕುಂಕುಮಾ ಗಲ್ಲಾಹಣೀ
ಹೊಸಾ ಸೀರಿ ತುಂಬಿದ ಉಡೀ
ಉರಿಯೋ ಹಸೆಮಣೆಗೆ ಹೊರಟಿತ್ತು ಸವಾರಿ
ಶ್ರಾವಣಕ್ಕೆ ಹೊಸಾಹರೆ

ಹೀಗೆ ಕಾವ್ಯ ಭಾಷೆಗೆ ಹಾಗೂ ಪ್ರತಿಮಾ ನಿರ್ಮಾಣಕ್ಕೆ ಸಂಬಂಧಿಸಿದಂತೆ ಈ ಬಗೆಯ ಬಹುಮುಖತೆಯನ್ನು, ಸೃಜನಶೀಲ ವೈವಿಧ್ಯವನ್ನು ಹಾಗೂ ಅದರ ಕಲಾತ್ಮಕ ಸಾಧ್ಯತೆಗಳನ್ನು ತೋರಿಸಿಕೊಟ್ಟವರಲ್ಲಿ ಬೇಂದ್ರೆ ಅಗ್ರಗಣ್ಯರಾಗಿದ್ದಾರೆ. ಕಾವ್ಯದಲ್ಲಿ ತಮ್ಮದೆ ಆದ ವಿವಿಧ ಪ್ರಯೋಗಗಳಿಂದ ಪರಂಪರೆಗೆ ಗಟ್ಟಿತನವನ್ನು ಅರ್ಥಪೂರ್ಣತೆಯನ್ನು ತಂದುಕೊಟ್ಟ ಬೇಂದ್ರೆಯವರು ಪ್ರತಿಮೆಗಳ ಪ್ರಯೋಗದಲ್ಲಿಯೂ ತಮ್ಮದೇ ಹಾದಿಯನ್ನು ಕಂಡುಕೊಂಡು ಪ್ರತಿಮೆಗಳಿಗೆ ಸ್ವತಂತ್ರ ಅಸ್ತಿತ್ವವನ್ನು ನೀಡದೆ ಅವುಗಳ ಭಾವವಾಹಕವಾಗಿ ಕವಿತೆಯ ಉದ್ದೇಶಕ್ಕೆ ಅಧೀನವಾಗಿರುವಂತೆ ಯೋಜಿಸಿರುವುದನ್ನು ಉದ್ದಕ್ಕೂ ಕಾಣಬಹುದು. ಅವರ ಕಾವ್ಯದ ಉಪಮೆ, ರೂಪಕ ಹಾಗೂ ಪ್ರತೀಕಗಳಿಗೂ ಅರ್ಥಸ್ಫುರಣೆಯ ವಿಧಾನವೇ

ಮುಖ್ಯವಾಗಿದೆ. ತಮ್ಮ ಹೊಸತನದಿಂದ ಬೆಳಗುತ್ತವೆ. ಬೇಂದ್ರೆಯವರ ಪ್ರತಿಮಾಲೋಕ ಹಲವಾರು ಕ್ಷೇತ್ರಗಳಿಂದ ಪುಷ್ಟಿಗೊಂಡದ್ದು. ಡಾ. ಜಿ.ಎಸ್. ಆಮೂರ ಅವರು ನುಡಿದಿರುವಂತೆ ಭೂಮ್ಯಾಕಾಶಗಳನ್ನೊಳಗೊಂಡ ಪಂಚಭೂತಗಳು, ಅಂತರಿಕ್ಷದ ಗ್ರಹಮಾಲೆ ಹಾಗೂ ನಕ್ಷತ್ರಗಳು, ಪ್ರಾಣಿ ಹಾಗೂ ಸಸ್ಯ ಪ್ರಪಂಚ, ವೈದಿಕ ವಾಙ್ಮಯ ಹಾಗೂ ಪುರಾಣಗಳು, ಋತುಚಕ್ರದಂಥ ಪ್ರಾಕೃತಿಕ ಘಟನೆಗಳು, ಮಾನವನ ಸಂಸ್ಕೃತಿ ಹಾಗೂ ಕ್ರಿಯಾಪ್ರಪಂಚ ಸಂಖ್ಯೆಗಳು ಸೇರಿದಂತೆ ವಿಜ್ಞಾನ - ಇಂಥ ಅನೇಕ ಕ್ಷೇತ್ರಗಳಿಂದ ಅವರು ತಮ್ಮ ಪ್ರತಿಮೆಗಳನ್ನು ದೊರಕಿಸಿದರು.

*ಧಾರವಾಡ ಆಕಾಶವಾಣಿ ವಿಚಾರ ಸಂಕಿರಣ ೨೭.೧.೧೯೯೬*

(ಈ ಲೇಖನದಲ್ಲಿಯ ಒಂದೆರಡು ಅಂಶಗಳಿಗೆ ಡಾ. ಎಚ್.ಎಸ್. ರಾಘವೇಂದ್ರರಾವ್ ಅವರ 'ಹಾಡೆ ಹಾದಿಯ ತೋರಿತು' ಕೃತಿಗೆ ಕೃತಜ್ಞ).

೩೪

# ವಿನಾಯಕರ ಐದು ನವ್ಯ ನೀಳ್ಗವನಗಳು

'ನವ್ಯಕಾವ್ಯ'(ಭಾಗ: ಎರಡು)ದಲ್ಲಿ ಪ್ರಕಟವಾಗಿರುವ 'ಐದು ನವ್ಯ ನೀಳ್ಗವನಗಳು' ಕುರಿತ ಒಂದು ಸ್ಥೂಲ ವಿವೇಚನೆ ಈ ಲೇಖನದ ಉದ್ದೇಶವಾಗಿದೆ. "ಒಂದು ಕಾವ್ಯ ಮಾರ್ಗದ ನವ್ಯತೆಯು ಅದರ ವಿಶಾಲದರ್ಶನದಲ್ಲಿದೆ. ವಿಕೃತಿಗಳ ಪ್ರದರ್ಶನದಲ್ಲಿಲ್ಲ" ಎಂದು ನಂಬಿರುವ ವಿನಾಯಕರು ಇವನ್ನು 'ನವ್ಯ ನೀಳ್ಗವನ'ಗಳೆಂದು ಕರೆದಿರುವುದು ಯಥೋಚಿತವಾಗಿದೆ. ಆದರೆ ಅದಕ್ಕಿಂತಲೂ ಈ ಕವನಗಳ ವಿವಿಧ ಸ್ತರಗಳಲ್ಲಿ ಒಡಮೂಡಿರುವ ಸಾಂಕೇತಿಕತೆ ಹಾಗೂ ಶೈಲಿಯ ಸಂಕೀರ್ಣತೆ ಆ ಮಾತನ್ನು ಹೆಚ್ಚು ಬಲಪಡಿಸುತ್ತದೆ.

ಮೊದಲನೆಯದಾದ 'ಉಜ್ಜಯಿನಿಯ ಮಹಾಕಾಲೇಶ್ವರ'ಕ್ಕೆ ಒಂದು ಉಪಯುಕ್ತವಾದ ಟಿಪ್ಪಣಿಯನ್ನು ಒದಗಿಸಲಾಗಿದೆ. ಪುರಾತನ ನಗರ ಉಜ್ಜಯಿನಿಯ ದ್ವಾದಶ ಜ್ಯೋತಿರ್ಲಿಂಗಗಳಲ್ಲಿ ಒಂದು ಪ್ರಮುಖ ಲಿಂಗವಾಗಿರುವ ಮಹಾಕಾಲೇಶ್ವರ ಕ್ಷೇತ್ರದರ್ಶನ ಪಡೆದಾಗ ಕವಿಯ ಪುರಾಣೇತಿಹಾಸ ಪ್ರಜ್ಞೆ ಜಾಗ್ರತವಾಗಿ ಇಡಿಯ ಕವಿತೆಯನ್ನು ಕಂಡರಿಸುತ್ತದೆ.

ದಿಲ್ಲಿ ಸುಲ್ತಾನರ ಪ್ರಭುತ್ವದಲ್ಲಿದ್ದಾಗ ಅಲ್ತಮಝ್‌ನೆಂಬವ ವಿಕ್ರಮಾದಿತ್ಯನ ದೈವತವಾದ ಮಹಾಕಾಲೇಶ್ವರನ ಗುಡಿಯನ್ನು ಹಾಳುಮಾಡಿ ಲಿಂಗವನ್ನು ಕೋಟಿ ತೀರ್ಥದಲ್ಲಿ ಒಗೆದ. ಸಿಂಧೆ ಮನೆತನದ ಮರಾಠಾ ರಾಜರ ಮಂತ್ರಿಯೊಬ್ಬ ಗುಡಿಯನ್ನು ಮತ್ತೆ ಕಟ್ಟಿಸಿದ. ಅಲ್ತಮಝ್‌ನನ್ನು ಸಂಬೋಧಿಸಿ ಕವಿತೆಯ ಮೊದಲ ಭಾಗ ಪ್ರಾರಂಭವಾಗುತ್ತದೆ. ಲಿಂಗದ ಶಿಲಾಪಿಂಡವನ್ನು ಕೋಟಿ ತೀರ್ಥದಲ್ಲಿ ಎಸೆದರೇನಾಯಿತು.?

ಮೂರ್ತಿಯೊಳಮೂರ್ತವನು
ಕಾಂಬ ಕನವರಿಕೆಯಿರೆ ಕೋಟಿಲಿಂಗಗಳಲ್ಲಿ
ಉದ್ಭವಿಸುವುದು ಮತ್ತೆ.

ಅಶರೀರ ಅಲ್ಲಾ ಈ ಲಿಂಗದಲ್ಲಿ ಶರೀರಿಯಾಗಿರುವುನೆಂದರರಿಯದ ಅವನ ಮತಾಂಧತೆಯನ್ನು ಖಂಡಿಸುತ್ತ

ಅರಿಯಲು ಸೃಷ್ಟಿಕರ್ತನನು
ಸೃಷ್ಟಿಯನೆ ಧ್ವಂಸಿಸುವರೆ? ಕಲಾರಾಧಕರ
ಕೋಟಿ ಶಾಪಗಳೆಲ್ಲ ನಿನ್ನ ತಲೆ ತಗ್ಗಿಸಿವೆ.

ಎಂಬ ನುಡಿ ಭೇದದಲ್ಲಿ ವಿಚಾರದ ಶೋಧವನ್ನು ಪ್ರಚೋದಿಸುವಂತಿದೆ. ಕುಶಸ್ಥಲೀ. ಅವಂತಿಕಾ, ಪ್ರತಿಕಲ್ಪಾ, ಕನಕಶೃಂಗಾ, ಕುಮದ್ವತಿ, ಪದ್ಮಾವತಿ, ಚೂಡಾಮಣಿ ಮೊದಲಾದ ಉಜ್ಜಯಿನಿಗಿರುವ ಹಳೆಯ ಹೆಸರುಗಳನ್ನು ಸಾಂಕೇತಿಕವಾಗಿ ಕವಿತೆಯ ಎರಡನೆಯ ಭಾಗದಲ್ಲಿ ಬಳಸಿಕೊಳ್ಳಲಾಗಿದೆ. ಯುಗಯುಗದಲ್ಲಿ ಅದು ತಳೆಯುತ್ತ ಬಂದ ನವಾವತಾರವನ್ನು ನೆನೆದಾಗ, ಪ್ರಾತಃಕಾಲದಲ್ಲಿ ಈಗಲೂ ಮಹಾಕಾಲೇಶ್ವರಕ್ಕೆ ನಡೆಯುವ ಭಸ್ಮಾರತಿ ಕವಿಗೆ ಅರ್ಥಪೂರ್ಣವಾಗಿ ತೋರುತ್ತದೆ:

ಅಹುದು ಉಜ್ಜಯಿನಿ ಇದು ನಗರ ಚೂಡಾಮಣಿ!
ಅದಕಂತೆ ನೀನೆತ್ತಿರುವೆ ಮಹಾಕಾಲೇಶ್ವರಗೆ
ಪಾತ್ರಃ ಸಮಯದಿ ಚಿತಾಭಸ್ಮದಾರತಿಯನ್ನು

ಕವಿತೆಯ ಮೂರನೆಯ ಭಾಗದಲ್ಲಿ ಮಹಾಕಾಲೇಶ್ವರನನ್ನುದ್ದೇಶಿಸಿ ಕವಿ ನುಡಿಯುತ್ತಾನೆ:

ಕಾಲಪ್ರವಾಹದೊಲು
ಕ್ಷಿಪ್ರೆ ಹರಿದಳು ನಿನ್ನ ಪದತಲವ ತೋಯಿಸುತ
ಉರುಳಿದವು ಯುಗಮಾನ

ಅದರ ಪೌರಾಣಿಕ ಹಾಗೂ ಐತಿಹಾಸಿಕ ಐತಿಹ್ಯಗಳನ್ನು ಆಧುನಿಕ ಕಾಲದವರೆಗೂ ಹೊಳೆಯಿಸುತ್ತ,

ನೀನು ನಿಂತವ ನಿಂತೆ ನಿಂತಲ್ಲಿಯೇ ನಿಂತೆ
ನಿನ್ನ ಪರಮ ರಹಸ್ಯವನ್ನರಿವ ಬಗೆ ಎಲ್ಲಿ
ಓ ಸ್ಥಾಣು, ಓ ಮಹಾಕಾಲೇಶ್ವರ!

ಎಂಬ ಉದ್ಗಾರದಲ್ಲಿ ಜಿಜ್ಞಾಸೆ ಕೆರಳುತ್ತದೆ. ಕಿರಿದಾದ ನಾಲ್ಕನೆಯ ಭಾಗದಲ್ಲಿ ಅದನ್ನು ವ್ಯಾಖ್ಯಾನಿಸಲಾಗಿದೆ. ಕ್ಷಿಪ್ರೆಯಲ್ಲಿ ಭೂತ, ಲಿಂಗದ ಗರ್ಭದಲ್ಲಿ ಭವಿತವ್ಯಲೀನವಾಗಿವೆ. ಮಹಾಕಾಲೇಶ್ವರನ ಜಟಾಜೂಟದಲ್ಲಿ ತೊಡಕಿ ಬಿದ್ದಿರುವ ಗಂಗೆ ಈ ಕ್ಷಿಪ್ರೆ. ಅವನು ಮಾತ್ರ ಮೌನಿ ಹಾಗೆಯೇ ಅನಂತ.

ನನ್ನೆದುರು ನೆಲೆಸಿರುವಿ, ನನ್ನೊಳೇತಕೆ ನುಡಿಯೆ?
ಮಾತಾಡು ಓ ಲಿಂಗವೆ

ಎಂಬ ಕವಿಯ ಆರ್ತಭಾವ ಆತ್ಮೀಯತೆಯಿಂದ ಆಪ್ಯಾಯಮಾನವಾಗಿದೆ. ಹಿಂದಿನ ಅನುಭಾವಿ ಕವಿಗಳ ಹಾಗೂ ಬೇಂದ್ರೆಯವರ ಮಾತಾಡು ಮಾತಾಡು ಎಲೆ ಲಿಂಗವೆ ಕವಿತೆಯ ಭಾವಸಾಹಚರ್ಯದಿಂದ ಅದನ್ನು ಇನ್ನಿಷ್ಟು ಆಳಕ್ಕೆ ಒಯ್ಯುತ್ತದೆ. ಕವಿಯ ಭಕ್ತಿಪೂರ್ಣವಾದ ಪೂಜೆಯಿಂದ ಲಿಂಗ ಕಣ್ತೆರೆದು ಮಾತಾಡಿತು:

ಯುಗಯುಗಾಂತರದಲ್ಲಿ ಕ್ಷಿಪ್ರೆ ಹರಿಯುವಳು;
ಹಳೆಯದನು ಮರೆಗಿರಿಸಿ ಹೊಸತು ತೆರೆಯುವಳು
ಬುನಾದಿ ಅವಳಿಹಳು. ನಾನನಾದಿ
ನೀನಾಗು ನಮ್ಮಿರ್ವರಿರವಿನ ಪ್ರವಾದಿ.

ಕ್ಷಿಪ್ರಾನದಿ ಕಾಲಕ್ಕೆ, ಕಾಲೇಶ್ವರ ಲಿಂಗ ಆನಾದಿ ತತ್ವಕ್ಕೆ ಸಂಕೇತವಾಗಿ ಅರ್ಥವಿಸ್ತಾರ ಪಡೆಯುತ್ತವೆ. ಸಂಪ್ರದಾಯವನ್ನು ವಿರೋಧಿಸದೆ ಅದರೊಳಗಿನ ಸಾರ್ವಕಾಲಿಕ ಸತ್ಯಕ್ಕೆ ಮನುಷ್ಯ ಪ್ರವಾದಿಯಾಗಬೇಕೆಂಬುದು ಕವಿಯ ತಾತ್ವಿಕ ನಿಲುವು. ಹಿಂದಿನ ಭಾಗದಲ್ಲಿ 'ಭಾರತದ ಕ್ಷೇತ್ರಾಧಿಪತಿ ನೀನು' ಎಂದು ಕವಿ ನುಡಿದದ್ದಕ್ಕೆ ಈಗ ಲಿಂಗ 'ಮೊದಲು ನಾನಿನ್ನ ಕ್ಷೇತ್ರಾಧಿಪತಿ. ನಿನ್ನ ಆತ್ಮ ಅರಳಿಸುವಂತೆ ಬಾಳು' ಎಂದು ಮರು ನುಡಿಯುತ್ತದೆ. ಸೂರ್ಯನೇತ್ರ ತೆರೆಯುವವರೆಗೂ ಕತ್ತಲಲ್ಲಿ ಕಾದಾಟ. ಆತ್ಮಕೋವಿದನಾದರೆ ಮಾತ್ರ ಬಾಳಿನಲ್ಲಿ ಹಾಲುಜೇನು. ಮಾಳ್ಕೆಗೆ ಗೊತ್ತು-ಗುರಿ ಉಂಟಾಗುವದೆಂಬ ತಿಳಿವು ನೀಡುತ್ತದೆ.

ಬುದ್ಧಿ, ಸಂಕಲ್ಪ, ಸಂಸ್ಕರಣ ಮೇಳವಿಸಿ
ನಿನ್ನ ಬಾಳಿಗೆ ನೀನು ಪ್ರಭು ಅಂದು, ಜಯಿಸಿ.

ಇಡೀ ಕವಿತೆಯ ವಸ್ತು ಹೀಗೆ ಹಂತಹಂತವಾಗಿ ಸಾಂಕೇತಿಕತೆ ಪಡೆಯುತ್ತ, ತತ್ವ ಮಥನಕ್ಕೊಳಗಾಗಿ ಕವಿ ಪಡೆದ ದರ್ಶನವಾಗಿ ನಿಲ್ಲುತ್ತದೆ ('ಸಂಸರಣ' ಪದಕ್ಕೆ ಚಲನೆ, ಗತಿ ಹಾಗೂ ಸಂಸಾರ ಎಂಬ ಎರಡು ಅರ್ಥಗಳಿರುವುದನ್ನು ಗಮನಿಸಬೇಕು).

೨

ರೈಲು ಪ್ರಯಾಣದ ರೋಮಾಂಚಕ ಸನ್ನಿವೇಶವೊಂದರ ಅಚ್ಚ ಅನುಭವವನ್ನು ರೂಪಕವಾಗಿ ಬಳಸಿಕೊಂಡು, ನಮಗರಿಯದಂತೆ ಜೀವನದಲ್ಲಿ ಹಠಾತ್ತಾಗಿ ವಿಧಿ ಕೆಡುಕು ಎದುರಾದಾಗ ಕವಿ ತಾನು ಕಲಿತ ರತ್ನಪಾಠದ ಚಿತ್ರವತ್ತಾದ ನಿರೂಪಣೆ 'ಕೂಟ ನಿಲ್ದಾಣದ ಸೈಡಿಂಗ್'ನಲ್ಲಿ ಕವನದ ವಸ್ತುವಾಗಿದೆ.

ಇದುವರೆಗೆ ಪಯಣಿಸಿದ ರೈಲುಗಾಡಿಯ ಡಬ್ಬಿಯೊಂದನ್ನು ಮತ್ತೊಂದು ರೈಲು ಶಾಖೆಗೆ ಜೋಡಿಸಲು ಕೂಟ ನಿಲ್ದಾಣದ(ಜಂಕ್ಷನ್) ಸೈಡಿಂಗ್‌ನಲ್ಲಿ ಬಿಟ್ಟಾಗ ನಡೆದ ಒಂದು ಘಟನೆ (ರೈಲು ಪ್ರಯಾಣ, ಡಬ್ಬಿಯೊಂದನ್ನು ಕಳಚುವುದು, ಮತ್ತೊಂದಕ್ಕೆ ಜೋಡಿಸಲು ಬಿಟ್ಟದ್ದು. ಕೂಟ ನಿಲ್ದಾಣ- ಇವೆಲ್ಲವೂ ಜೀವನದಲ್ಲಿ ಒದಗುವ ಸನ್ನಿವೇಶಗಳಿಗೆ ಸಂಕೇತವಾಗಿ ಪರಿಣಮಿಸುವುದನ್ನು ಇಲ್ಲಿ ಗಮನಿಸಬೇಕು).

ತಾಣವಾವುದೋ ತಿಳಿಯೆ
ಇದ್ದಕಿದ್ದೊಲು ಚಲನೆ ಸ್ಥಗಿತವಾಯ್ತು
ಎಲ್ಲಿಯೋ ಬಂದೆ ಏನನ್ನೋ ಅನುಭವಿಸಿದೆ

ಸಮೀಪದಲ್ಲಿ ಎದ್ದೆದ್ದು ಬಡಿಯುವ ಕೂಟ ನಿಲ್ದಾಣದ ಗದ್ದಲ. ಅಲ್ಲಿ ವಿವಿಧ ಬಗೆಯ ವ್ಯಕ್ತಿಗಳ, ಅವರ ಚಟುವಟಿಕೆಗಳ ಚಿತ್ರಣ ಬಾಳಿನ ವೈವಿಧ್ಯವನ್ನು ಕಣ್ಣಿಗೆ

(ಕಿವಿಗೂ) ಕಟ್ಟುತ್ತದೆ (ಆದರೆ 'ಇದೇ ಬಾಳು, ಹಾಳು ಹಾಳು, ತಿರುವು-ಮುರುವು. ಇದೇ ಇಳೆ, ಅದರ ಬೆಳೆ' ಎಂಬ ವ್ಯಾಖ್ಯಾನ ಪ್ರತಿಮೆಯನ್ನು ಕೆಲಮಟ್ಟಿಗೆ ದುರ್ಬಲ ಗೊಳಿಸುತ್ತದೆ). ಆ ಅಬ್ಬರದ ಕ್ಷಣ ಕರಗುತ್ತಿದ್ದಂತೆಯೇ ಅಪರಾತ್ರಿಯಲ್ಲಿ ಅಪರಿಚಿತತೆ ಹಾಗೂ ಏಕಾಕಿತನದ ಅನುಭವ ('ಬಾಳಿನಲ್ಲಿ ಗಾಲಿಮನೆ ಒಬ್ಬಗೊಂದು') 'ಜನರ ನಡುವಿದ್ದರೂ ವನದ ಏಕಾಂತ!' ನಾಲ್ಕು ಹೆಜ್ಜೆ ನಡೆದು ಹೋದರೆ ಅಲ್ಲಿ ಜನಜಂಗುಳಿಯಿದೆ. ಆದರೆ ಹೆಜ್ಜೆಯಿಡುವುದೇ ಕಠಿಣ. 'ಪ್ರವಾಸಿ ಯಾರೇ ಇರಲಿ... ಅದ್ವೈತವೇ ಗತಿ' ಎನ್ನುವಲ್ಲಿ ವಿಕಾರ ರಹಿತವಾದ ಸಮತ್ವಭಾವವನ್ನು ಸೂಚಿಸಲಾಗಿದೆ.

ಇಂಥ 'ನಿಶ್ಚಲತೆ'ಯಲ್ಲಿ ಒರಗಿಕೊಂಡಾಗ ('ಉಸಿರೊಂದು ತನಗೆ ತಾ ಚಲಿಸುತಿತ್ತು') ರಕ್ತ ಹೆಪ್ಪು ಗಟ್ಟಿಸುವಂಥ ಘಟನೆ. ಮನೆ(ಡಬ್ಬಿ)ಯ ಎರಡೂ ಬದಿಗೆ ಕಳ್ಳ ದನಿ ಸಿಳ್ಳು, ಅಟ್ಟಹಾಸ, ಬಾಗಿಲು ಕಿಡಿಕಿಗಳಿಗೆ ಒದೆತ, ಗುದ್ದು, ವಿಧಿ ಹೀಗೆ ಶಲ್ಯದಂತೆ ಎದರು ಬಂದು ನಿಂತಿರುವಾಗ,

'ಒಬ್ಬೊಂಟಿಗನು ನಾನು' ಎಂಬ ನೋವಿನೊಳೂನು
ಅದೃಷ್ಟದೊಲು ಬೆಂಬಿಡದೆ ನಿಂತಿರುವ ಸನ್ನಿಧಿ
ಅದೆಲ್ಲಿ?

ಎಂದು ಕವಿ ತನ್ನಷ್ಟಕ್ಕೆ ಕೇಳಿಕೊಳ್ಳುತ್ತಾನೆ.

ಅವಿನಾಶಿಯಾದುದಕೆ ನನ್ನ ನಾಶದೊಳೂನು
ಇರಲಿ ಜಯ ಜಯವೆಂದೆ.

ಸನ್ನಿಧಿಯಲ್ಲಿ ಅವನ ನಂಬಿಕೆ ಗಾಢವಾದದ್ದು. ಇದೂ ಒಂದು ವಿಕಾಸದ ದಾರಿಯೇ ಆಗಿರಬಹುದು ಎಂದು ನಿರುದ್ವಿಗ್ನತೆಯಲ್ಲಿ-

ನಾಶದೀ ಗವಿಮಾರ್ಗದೊಳಗೆ ಹಾಯ್ದು
ಮತ್ತೆ ಬಯಲನೆ ಸೇರಬಹುದು ಬದುಕಿನ ಬಂಡಿ.

ಎಂಬ ಆಶಾವಾದವೂ ಜೊತೆಯಲ್ಲಿಯೇ ಮಿನುಗುತ್ತದೆ. ಬಂದುದೆಲ್ಲ ಬರಲಿ ಎಂದು ಮರಣ ಭಯವನ್ನೂ ತೊರೆದು ತಟಸ್ಥಭಾವದಿಂದ ವಿಧಿಯನ್ನೆದುರಿಸಿದಾಗ

ಆತ್ಮಗೌರವವನುಳಿಸಿದವು ಸಂಯಮ-ಶ್ರದ್ಧೆ ;
ಗಾಲಿಮನೆಯನು ಅದರ ಚಿಲಕ-ಕೊಂಡಿ.

ಆಕಸ್ಮಿಕದ ದಾಳಿ ಶನೀಶ್ವರ ಪರೀಕ್ಷಣವು ಬೇರೆ ತಾಣಕ್ಕೆ ತಿರುಗಿತು.

..... ಹಾಕಿ ವೇಗದಿಂದೈತಂದು
ಗಾಲಿಮನೆಕೊಂಡಿ ಜೋಡಿಸಿಕೊಂಡು ಎಂಜಿನ್ನು
ಮರಳಿತ್ತು ಕೂಟ ನಿಲ್ದಾಣದೆಡೆಗೆ

ಒದಗಬಹುದಾದ ದುರ್ಘಟನೆಯಿಂದ ಪಾರುಗೊಳಿಸಿದ ಚಿತ್ರ ಹೀಗೆ ಕವಿತೆಯ ಕೊನೆಯನ್ನು ಧ್ವನಿಪೂರ್ಣವಾಗಿಸಿದೆ. 'ಉದ್ವೇಗವಿಲ್ಲದಲೆ ಕೆಡುಕನೆದುರಿಸುವ ಕಲೆ' ಕವಿ

ಕಲಿತ ರತ್ನಪಾಠ. ಭಾವದ ಉತ್ಕಟತೆಯಿಂದಲೂ, ನಾಟಕೀಯತೆಯಿಂದಲೂ ಕವಿತೆ ಉದ್ದಕ್ಕೂ ಓದುಗನನ್ನು ತನ್ಮಯಗೊಳಿಸುತ್ತದೆ.

೩

ರೈಲು ಪ್ರಯಾಣದ ಈ ಒಂದು ಭಯಾನಕ ಸನ್ನಿವೇಶ ಮೇಲಿನ ಕವಿತೆಯ ವಸ್ತುವಾಗಿದ್ದರೆ ತನ್ನ ಜಗತ್ಪ್ರವಾಸದ ಒಟ್ಟು ಅನುಭವದ ನೆಲೆ-ಬೆಲೆಯನ್ನು 'ಪಂಡಿತಾಃ ಸಮದರ್ಶಿನಃ' ಕವಿತೆಯಲ್ಲಿ ಕಂಡುಕೊಳ್ಳಲಾಗಿದೆ.

ಓಂ ನಮಃ ಶಿವಾಯ
ಪಾಟಿ ಕೈಯೊಳು ಬಂತು ಅಕ್ಷರ ಬರೆದು ತಂದೆ
ಅಂದಿಗಾರಂಭವಾಯ್ತೆನ್ನ ದೀರ್ಘಪ್ರವಾಸ

ಕವಿತೆಯ ಪ್ರಾರಂಭವೇ ಹೀಗೆ ಆಕರ್ಷಕವಾಗಿ ಕವಿಯ ವಿದ್ಯಾಭ್ಯಾಸ, ಅದಕ್ಕಾಗಿ ಕೈಕೊಂಡ ನೆಲ-ಜಲ-ಆಕಾಶ ಪ್ರಯಾಣ, ಕೊನೆಯಲ್ಲಿ ಪಾದಯಾತ್ರಿಕನಾಗಿ ವಿಶ್ವಪರಿವ್ರಾಜಕನಾದ ಸ್ಥಿತಿ-ಗತಿ ಸಂದರ್ಭೋಚಿತವಾಗಿ ಸಾಂಕೇತಿಕ ಮಹತ್ವವನ್ನು ಪಡೆಯುತ್ತ ಬಿತ್ತರಗೊಂಡಿದೆ.

ಊರ ಗಡಿಯಲ್ಲಿದ್ದ ಸಾಲೆಯಿಂದ ಎತ್ತಿನ ಬಂಡಿಯಲ್ಲಿ ಮೋಜುಗಡಿಗಳ ಕಡೆಗೆ ಕುತೂಹಲಿಯ ಪಯಣ. ಬಾಲ್ಯದಲ್ಲಿಯ ಶಿಕ್ಷಣದ ಘಟ್ಟ ಮುಗಿಯುತ್ತಿದ್ದಂತೆ

ನೊಗದಡೆಗೆ ಕುಳಿತ ಯಜಮಾನನೆಂದನು ಸಾಕು
ಇನ್ನು ಮುಂದಿನ ಪಯಣಕಿದೆ ರಯಲು ಬಂಡಿ

ವಿನಾಯಕರಿಗೆ ವಿಶಿಷ್ಟವಾದ ಶೈಲಿ ಓದುಗನ ಕುತೂಹಲಕ್ಕೆ ಪುಟಗೊಡುತ್ತದೆ. ಪ್ರಥಮ ತರಗತಿ ಟಿಕೆಟ್ಟು ಪಡೆದು ರಭಸದ ಓಟ. 'ನೂಕುನುಗ್ಗಲು ಮುರಿಯುವೊಲು ಮೂಳೆ, ಮಗ್ಗಲು' ನಾಗರಿಕತೆಯ ಅನುಭವ ಸೂಚಿ. ಕೋಳಿವಾಡದಿಂದ ಕ್ಯಾಂಟರ್ ಬರಿಯ ವರೆಗಿನ ಸ್ಥಳಗಳ ಉಲ್ಲೇಖ. ಅಲ್ಲಿಯೆ ಆಯಾ ನಾಡಿನ ಕವಿ-ಕೃತಿಗಳ ಅಧ್ಯಯನವನ್ನೂ ಒಳಗೊಂಡಂತೆ ಭಾವಿಸಬಹುದು. ಅಭ್ಯಾಸ ಮಾಡಿದಷ್ಟೂ ಜ್ಞಾನದ ವಿಸ್ತಾರದರಿವು: ಕ್ಷಿತಿಜವನು ಮುಂದೂಡಿತಾ ರಯಲು ಗಾಡಿ; ಹಡಗದಲ್ಲಿ ಇಂಗ್ಲೆಂಡಿಗೆ ಪ್ರಯಾಣ ಹೆಚ್ಚಿನ ವಿದ್ಯಾಭ್ಯಾಸಕ್ಕೆ

ವಿಸ್ತಾರದರಿವಾಯ್ತು ಆಳದನುಭವ ಬಂತು.
ಕಪ್ತಾನನೆಂದ: ತೊಲಗಿನ್ನು, ನೀ ಪಂಡಿತ.

ರಾಶಿ ವಿದ್ಯೆ ಪರ್ವತಪ್ರಾಯವಾಗಿ ಎದುರಿಗೊಟ್ಟಿರುವಾಗ ಧರಾತಲದಲ್ಲಿ ಪಡೆದ ಅರಿವು ತಿಲಮಾತ್ರ. ಅದಕ್ಕಾಗಿ

ಏರುತಾಗೊಂದು ಹೆಲಿಕಾಪ್ಟರಿನ ಹೆಗಲನ್ನು
ಈಕ್ಷಿಸಿದೆ ಸಾಮಾಜಿಕ ಜ್ಞಾನವಲಯವನು.

ಈ ಮೊದಲು ಭೂ ಪ್ರದೇಶದಲ್ಲಿ ಕಾಣದಿದ್ದ ಬೆಡಗನ್ನು ಕಂಡು, ಏರದಿಹ ಬೆಟ್ಟಗಳ

ಮುಡಿಯ ಮೀಸಲು ಮುರಿದು ಹಾರಿದಾಗ ಈ ಮೊದಲು ತಿಳಿದದ್ದು ಎಷ್ಟು ಅಲ್ಪ ಎಂಬ ಭಾವನೆ ಮೂಡಿತು. ಇನ್ನುಳಿದದ್ದು ವಿಜ್ಞಾನಿಗಳ ಪ್ರಪಂಚದ ಗಹನ

ಆಗ ಜೆಟ್ಟೊಂದನೇರುತ ಮುನ್ನೆಗೆದೆ ನಾನು
ಕೈಲಾಸ ಶಿಖರವನು ಮೀರುತಾಕಾಶದೊಳು

ಅದನ್ನೂ ಭೇದಿಸಿದ್ದಾಯಿತು. ರಷ್ಯ, ಅಮೇರಿಕೆಗಳು ವಿಜ್ಞಾನ ಪ್ರಪಂಚದಲ್ಲಿ ಸಾಧ್ಯಿಸಿದ ವಿವಿಧ ಮಹತ್ತರ ಸಾಧನೆಗಳನ್ನು, ಯಂತ್ರದದ್ಭುತ ಸೃಷ್ಟಿಗಳ ದರ್ಶನಾಗಾರವನ್ನು ಕಂಡು ಅಚ್ಚರಿ. ಇಷ್ಟಾದ ಮೇಲೂ 'ಮುಗಿಲ ಗುಮ್ಮಟವನ್ನು ಭೇದಿಸುವರಾರು?' ಎಂಬ ಪ್ರಶ್ನೆ ಮನಸ್ಸನ್ನು ಕೆಣಕಿತು. 'ಸ್ಥಾನಬ್ರಹ್ಮದ ರಹಸ್ಯಾಗರ' ಕಾಣಲು ಕ್ಷಿಪಣಿಯನ್ನೇ ಉಡ್ಡಾಣಿಸಿದ ಕವಿ. ದೇಶ-ಖಂಡ ಪದರು ಪದರಾಗಿ ಪೃಥ್ವಿ ಗೋಲಾಕಾರ ತಳೆಯಿತು. ರಾತ್ರಿ-ಹಗಲನ್ನು ಮೀರಿ ಸೂರ್ಯ ನಿರಂತರ ಪ್ರಕಾಶಿಸಿದ. ಚಂದ್ರ ಬೆನ್ನು ತೋರಿಸಿ ಓಡಿದ.

ಆದರಾ
ತಾರೆಗಳು ಮಾತ್ರ ತೋರದೆ ತಮ್ಮ ಗೂಢವನು
ಹೊಳೆದಿಹವನಂತ ಸ್ತಬ್ಧತೆಯೊಂದು ಪಾಂಗಿನಲಿ.

ಅವಿನ್ನೂ ತಮ್ಮ ಗುಟ್ಟು ಬಿಟ್ಟುಕೊಟ್ಟಿಲ್ಲ. ಈ ಎಲ್ಲ ಕ್ಷೇತ್ರಗಳಲ್ಲಿ ಮನುಷ್ಯನ ಒಟ್ಟು (ಬಹಿರಂಗದ) ಸಾಧನೆಯ ಪರಿಚಯ ಕವಿಗಾಗಿದೆ. ಆದರೆ 'ಉಡ್ಡಾಣಿಸಿದವರೆಲ್ಲ ಪಂಡಿತರೇ?' ಎಂದು ಮುಗಿಲಂಗಳದಿ ದನಿಯೊಂದು ಅಣಕಿಸಿತು. ಅದು ಮತ್ತೆಲ್ಲೂ ಅಲ್ಲ, ಕವಿಯ ಅಂತರಂಗದಲ್ಲಿಯೇ ಮೊಳಗಿದ್ದು, ಆಕಾಶವಾಣಿಯೇ ಅಂತರ್ವಾಣಿಯಾಗಿ ನುಡಿಯಿತು:

ಮೂಡಿ ಬರಲಿನ್ನು
ನಿನ್ನ ಬಾನಿನೊಳೊಂದು ಸಮ್ಯಗಂತರ್ ದೃಷ್ಟಿ
ಎದೆಯಿಂದುಕ್ಕಿ ಬರಲಿ ಅಡಗಿದಂತಃ ಸ್ಫುರಣ.
ಪಾದಯಾತ್ರಿಕನಾಗು.

ಹಾಗಾದಾಗ ಭುವನದೆಲ್ಲ ಭವ್ಯತೆಗಳನ್ನು ಅನುಭವಿಸಲು ಸಾಧ್ಯವಾಗುತ್ತದೆ. ಎಲ್ಲವನ್ನು ಅರಿತರೂ ತನ್ನ ತಾನರಿತಾಗ ಮಾತ್ರ ಅದಕ್ಕೆ ಪೂರ್ಣತೆಯೊದಗಬಹುದು. ಈ ಅರಿವು ಮೊಳೆತಾಗ ಕವಿ 'ಉತ್ಕಟತೆಯಾರಾಧಕ, ಪೂರ್ಣತೆಯ ನಿಸ್ಸೀಮ ಭಕ್ತ, ಸಂಕ್ರಮಿಸುವ ವಿಶ್ವ ಪರಿವ್ರಾಜಕ'ನಾಗಿ ಪರಿಣಮಿಸುತ್ತಾನೆ(ಭೌತಿಕ ಬೆಳವಣಿಗೆ ಹಾಗೂ ಅಧ್ಯಾತ್ಮಿಕ ಶಕ್ತಿಗಳ ಸಮನ್ವಯ ಹಾಗೂ ಸಮದರ್ಶಿತ್ವವನ್ನು ಮನಗಾಣುವದೇ ನಿಜವಾದ ವಿದ್ಯೆ ಹಾಗೂ ಪಾಂಡಿತ್ಯ). ಕವಿಯ ಈ ವೈಯಕ್ತಿಕ ಅನುಭವದಲ್ಲಿ ಸಾರ್ವತ್ರಿಕತೆ ನೆಲೆ-ಬೆಲೆ ಓದುಗರಿಗೆ ಗೋಚರಿಸುವಂತಾಗುವುದೇ ಕವಿತೆಯ ಯಶಸ್ಸಿಗೆ ಸಾಕ್ಷಿಯಾಗಿದೆ.

'ಮರ್ತ್ಯದಲ್ಲಿ ನಿಂತು ಗೆಲ್ಲು, ಮರ್ತ್ಯವೆ ಒರೆಗಲ್ಲು' ಎಂಬ 'ದ್ಯಾವಾಪೃಥಿವಿ'ಯ ತಾತ್ವಿಕ ನಿಲುವು ಇಲ್ಲಿ 'ಪಾದಯಾತ್ರಿ'ಯ ಅಂತರಂಗದ ದರ್ಶನವಾಗಿ ಪರಿಣಮಿಸಿದಂತಿದೆ.

ಅನೇಕ ಅಡೆತಡೆಗಳನ್ನು ದಾಟಿ, ಬಿದ್ದೆದ್ದು. ತಿರುವುಗಳನ್ನು ಪಡೆದು ನಡು ನಡುವೆ ಜುಳುಜುಳು ನಾದಗೈದು ಸಮುದ್ರವನ್ನು ಸೇರುವ ನದಿ ಮನುಷ್ಯ ಜೀವನಕ್ಕೆ ತಕ್ಕ ಪ್ರವೇಶ. ಭಾರತೀಯ ತಾತ್ವಿಕ ಪರಂಪರೆಯ ಹಿನ್ನೆಲೆಯಲ್ಲಿ ಅದನ್ನು ಸಮರ್ಥವಾಗಿ ನಿರ್ವಹಿಸಿದ ಕವಿತೆ 'ಕಾವೇರಿಯ ತರಂಗಾಂತರಂಗ', ಆತ್ಮಕಥನದ ತಂತ್ರ ಅದಕ್ಕೆ ಸಮುಚಿತವಾಗಿ ಹೊಂದಿಕೊಂಡಿದೆ.

ಮರಬಳ್ಳಿ, ಹಕ್ಕಿಗಳ ಆವರಣದಲ್ಲಿ ಚಂದ್ರಿಕಾಸ್ವಪ್ನದಲ್ಲಿ, ಪರ್ವತರಾಜನ ಅನುಮತಿಪಡೆದು ವಿಹರಿಸಹೊರಟ ಪಾರ್ವತಿಯಂತೆ (ನದಿಯೂ ಪರ್ವತದಿಂದ ಹುಟ್ಟಿದ್ದಲ್ಲವೇ?) ಉತ್ಕಟೇಚ್ಛೆಯಿಂದ ಹರಿದೇ ಹರಿದಳು. 'ನಿರಂತರ ಚಲನದಲ್ಲಿ ಸಾಧಿಸಿತು ಸ್ಥಿರತೆ', ದಾರಿ ಸುಗಮವಾಗಿದ್ದರಿಂದ-

ಶಿವತತ್ವವನು ಮರೆತ ದಾಕ್ಷಾಯಿಣಿಯಂತೆ
ಗಾಳಿತತ್ವದಿ ಗೋಪುರವ ಕಟ್ಟಿ ತೇಲಿಸಿದೆ

ಆದರೆ ಅದು ಕುಸಿಯಲು ತಡವಾಗಲಿಲ್ಲ. ಸುಂದರಸ್ವಪ್ನ ಮರೆಯಾಗಿ ಸಾವು-ನೋವುಗಳುಂಡು ಜೀವ ತಲ್ಲಣಿಸಿತು. ಏಕಾಕಿಯಾಗಿಸಿ, ಕಣಿವೆಯೊಂದರೆದುರು ನಿಲ್ಲಿಸಿ

ಕಾಲಮುಗಿವನಕ ನಿನಗಿದು ಕಾಲುದಾರಿ.
ಜೀವವಿರುವನಕ ನಿನಗಿದು ಜಾರುಬಂಡಿ.

ಎಂದು ರಹದಾರಿಶಿಲ್ಪಿ ನೂಗಿಸಿಬಿಟ್ಟ ಮುಗ್ಧೆಯನ್ನು. ಜೀವನದಲ್ಲಿ ಮೊದಲ ಆಘಾತ. ರೂಪ ಸೀಕರವಾಗಿ ಆಸ್ತಿತ್ವವೇ ಇಲ್ಲವೆನಿಸಿತು. ಕೋಟಿ ಸೀರ್ಪನಿಗಳಲ್ಲಿ ಯಾವುದೋ ಒಂದಕ್ಕೆ ಪಾತಾಳದ ತಳ ಸಿಕ್ಕಿತು.

ಹನಿಗೆ ಹನಿಸೇರುತ್ತ ಮತ್ತೆ ನಾ ನಾನಾದೆ.
ಭೀತಿ ಮನೆ ಮಾಡಿದರೂನು ಒಳಗೊಳಗೆ
ನಾ ಹರಿದೆ ತಳ್ಳಂಕಗೊಂಡ ಜಲಕನ್ಯೆಯೊಲು

ನಸುಕು ಬಂತೆನ್ನುವಷ್ಟರಲ್ಲಿ ಮತ್ತೊಂದು ಪೆಟ್ಟು. ಸೂರ್ಯನನ್ನು ಕಾರ್ಮೋಡ ಗೋರಿ ಗಟ್ಟಿ ಇವಳನ್ನು ಮೂದಲಿಸಿದವು. ಬಿರುಗಾಳಿ, ಮಿಂಚು, ಸಿಡಿಲು ಪ್ರಳಯಸ್ರಾವದಲ್ಲಿ ತಾನಳಿಯಬಹುದೆ?

ನನ್ನ ಛಲ ಅಳಿಯುವುದೆ?
ಅವ್ಯಕ್ತ ನದಿಯು ನಾ ಪ್ರವಹಿಸುವೆನು.

ಹಿಡಿದನೋಂಪಿ ಚಲವಿಚಲವಾಗದ ಧಾರೆಯಾಗಿ ಧುಮುಕುವುದು. ಮೋಡಗಳೆಲ್ಲ ಚದರಿದವು.

ಯಥಾ ಪೂರ್ವಳು ಹರಿದೆ. ತಥಾಗತನೊಲು ಸೂರ್ಯ
ವೃಥಾರೋಪಗಳಾಚೆ ರಥಾರೂಢನಾದ

(ಇದು ಪ್ರಾಸವ್ಯಾಮೋಹವಲ್ಲ. ಆ ಚಣದ ದೃಢತೆ, ಉತ್ಸಾಹ, ಸಂತೋಷಗಳನ್ನು ಪ್ರತಿಬಿಂಬಿಸುವ ಅಭಿವ್ಯಕ್ತಿಯ ಗಟ್ಟಿತನ).

ಇಷ್ಟಕ್ಕೆ ಆತಂಕಗಳು ಮುಗಿಯಲಿಲ್ಲ. ಮುಂದೆ ತಲೆಯೆತ್ತಿ ನಿಂತ ಬೆಟ್ಟಗಳಿಂದಾಗಿ ಗತಿ ಮಂದವಾಯಿತು. ದುರ್ಗಮ ವ್ಯೂಹವನ್ನು ಹೇಗೆ ಭೇದಿಸುವದು? ರಾಮಭಕ್ತನಂತೆ ಉಲ್ಲಂಘನೆ ಸಾಧ್ಯವಿಲ್ಲ 'ಅಧೋಗತಿಗೆಲ್ಲಿ ಊರ್ಧ್ವಗತಿ?' ಸಹ್ಯಾದ್ರಿಪ್ರಾಯವನ್ನು ಮರೆತು ಬೆಳುವಲಕ್ಕೆ ಸಾಗಿದರೆ ದಾರಿ ಸಿಗಬಹುದು. ಆದರೆ ಅಂಥ ಸಂಕಟ ಸಮಯದಲ್ಲೂ ಒಳಮನಸಿಗನಿಸಿತು:

ಋತವೆಲ್ಲಿ ಕರೆಯುವುದೊ
ಕಣಿವೆಯಾದರೂ ಅದುವೆ ದಾರಿ ನನಗೆ
ಸ್ವಯಂ ಪ್ರೇರಣೆಯ ಹೊಳಹು ಸ್ವಯಂಭುವಿನ ಮಾರ್ಗ.

ಪ್ರೇರಣೆಯ ಪಾರಣೆಗೆ ಸೆಣಸಿ, ಬೆಟ್ಟದ ಪಾದಗಳ ಬಳಸಿ ಮುನ್ನುಗ್ಗಿದಳು. ತಪ್ಪಲಲ್ಲಿಳಿದು, ಗಹ್ವರಗಳನ್ನು ಹೊಕ್ಕು ಗೋಗರೆದು ಭಗ್ನ ಸ್ರೋತಳಾಗಿ ಮುಂದುವರಿಯಲು ಹವಣಸುತ್ತಿರುವಾಗ ಹೊಳೆಯಿತು: 'ಬೆಟ್ಟ ಪಾರ್ಥಿವ ಲಿಂಗಗಳಿವು', 'ಪರಮೋದಾರ ಪ್ರೀತಿ ನಿಂತಿಹುದಿಲ್ಲಿ ಪರ್ವತಗಳಾಗಿ' ಒಂದು ಪಾದ ತಾನೆ ಸರಿದು ದಾರಿ ಮಾಡಿಕೊಟ್ಟಿತೊ ಏನೋ. ಅಂತು 'ದಾರಿ ಮಾಡಿರುವ ಪಾದಕೆ ಬಿದ್ದೆ'. ಅಗಲಿದ್ದ ಹೊನಲುಗಳೆಲ್ಲ ಬಂದು ಮತ್ತೆ ಹೊಂದಿಕೊಂಡವು. ಆಗ ಗಿರಿಶಿಖರದಿಂದ ಹೊಮ್ಮಿದ ಗಗನದ ಮಂಗಲ ಜಯಗೀತ ಜೀವನ ಚಕ್ರದ ಅರ್ಥಪೂರ್ಣತೆಯನ್ನು ಸಾರುವಂತಿದೆ:

ಪರ್ಜನ್ಯವಾಗಿಳಿದು ನೀನು ನದಿಯಾಗಿರುವೆ
ಬೃಹತ್ತರಾಕಾರೆ, ಭವ್ಯತರ ರೂಪ!
ಉಗಿಯಾಗಿ ಬಾ ಮತ್ತೆಕಡಲಿನೊಳಗಿಂದ!
ಬಾನಂಗಳದಿ ತಿರುಗು ಆಗಿ ಶತರೂಪೆ!

ಇನ್ನೇನು, ಸಮುದ್ರ ದೂರವಿಲ್ಲ. 'ಆ ಅನಂತರವ ಬೆರೆವೆನೆಂಬ ನುಡಿ ದಿಟವೇ?' ಎಂದು ತನ್ನ ಪ್ರಶ್ನೆಗೆ ತಾನೇ ನಕ್ಕಳು. ಯಾಕೆಂದರೆ ಈ ಅವಸ್ಥೆ ತನ್ನ ಪ್ರಜ್ಞೆಯನ್ನು ಮೀರಿದ್ದು. ಅದರ ಅಂತರ ತಿಳಿದಿಲ್ಲ. ಸಮುದ್ರನಾಥನ ಗಾಂಭೀರ್ಯ ಬೇರೆಲ್ಲಿಯೂ ಕಾಣದಂತಹುದು. ಸಾಂತವು ಅನಂತವನ್ನು ತಿಳಿಯ ಬಯಸಿದರೂ ಅದಕ್ಕೆ ಅಂತವೇ ಹತ್ತದು. ಅಂತೇ ಅದು ಅನಂತ. ಆದರೂ ಅದನ್ನು ತಿಳಿಯಲು ಏನು ಬೇಕು?

ಸಾಂತ ಮುಖದಲ್ಲಿ ಓ ಅನಂತಾಭಿರ ರುಚಿಸನೆ,
ಮರ್ತ್ಯನಯನದೊಳು, ಕ್ಷಣಾರ್ಧದಲಿ ತೆರೆದೊಡನೆ
ಇದ್ದಿರಬಹುದಾದ ಅಮರ ದೃಷ್ಟಿ.

ಸಮುದ್ರನಾಥನಿಗೆ ಒಂದೊಂದು ನದಿಯೂ ಭಾರ್ಯೆ ಎಂದು ಭಾವಿಸಿದ ಕಾವೇರಿಗೆ ತನ್ನ ಮಂದ ಪ್ರಜ್ಞೆಯ ಅರಿವಾಗುತ್ತದೆ (ನದಿಯು ಸಮುದ್ರಕ್ಕೆ ಕೂಡುವಾಗಿನ ಅದರ

ಮಂದ ಗಮನವನ್ನೂ ಇಲ್ಲಿ ನೆನೆಯಬಹುದು). ಯಾವ ಕಣ ಯಾರೆಂದು ಕಾಲಕ್ಕೂ ತಿಳಿಯದಿರುವಾಗ ನಾಥ, ನಾಥೆ, ಭಾರ್ಯೆ ಯಾರು? ಎಂಬ ಪರಿಶೀಲನದೊಂದಿಗೆ ಕವಿತೆಗೆ ತಕ್ಕ ಮುಕ್ತಾಯ ಒದಗಿದೆ:

ಪ್ರಥಮ ಸಂಗಮದಲ್ಲಿ ನದಿ ಭಾರ್ಯೆಯಾಗುವಳು,
ಅದಕೆ ಮರುದಿನ ನಾಥೆ, ಅದರ ಮರುದಿನ ನಾಥ!
ಓತ ಸಮುದ್ರ ಪುರುಷನ ನದಿಯು ವರಿಸಿರಲು
ಪಾರ್ವತಿಗೆ ಕಂಡಿದ್ದ ಪರಮೇಶ್ವರ.

ಕವಿತೆಯ ಪ್ರಾರಂಭದಲ್ಲಿ ಕಾವೇರಿ ನದಿಯಲ್ಲಿ ಅಂತರ್ಗತವಾಗಿದ್ದ ಪಾರ್ವತಿ ಶಿವತತ್ವವನ್ನು ಮರೆತ ದಾಕ್ಷಾಯಣಿಯಾಗಿದ್ದವಳು ಈಗ ಅದನ್ನು ಕಂಡುಕೊಂಡಿದ್ದಾಳೆ.

ನದಿಯ ಪ್ರತೀಕ ಸಮಗ್ರವಾದ ವಿವರಗಳೊಂದಿಗೆ ವಿನಾಯಕರ ಕೈಯಲ್ಲಿ ಅವರ ತಾತ್ವಿಕ ಚಿಂತನೆಗೆ ಸಜೀವ ಪ್ರತಿಮೆಯಾಗಿ ಸಾರ್ಥಕಗೊಂಡಿದೆ.

೫

ಜಗತ್ತು ಸುಖ-ದುಃಖ ಪಾಪ-ಪುಣ್ಯ ಇತ್ಯಾದಿ ಅನೇಕ ದ್ವಂದ್ವಗಳಿಂದ ಕೂಡಿದೆ. ಈ ದ್ವಂದ್ವಗಳು ಹಾಸುಹೊಕ್ಕಾದ ಬಾಳಿನ ಬಟ್ಟೆಯಲ್ಲಿ ಜೀವ ಹೆಜ್ಜೆಯಿಡುತ್ತ ನಡೆದಿದೆ. ಅದನ್ನು ಅನುಭೋಗಿಸುತ್ತ, ಇದನ್ನು ಮೀರಿ ಬಾಳುವುದು ಸಾಧ್ಯವಿಲ್ಲವೆ? ಎಂಬುದರ ವಿವೇಚನೆ 'ಏಳು ಕುದುರೆ ಸವಾರ' ಕವಿತೆಯ ವಸ್ತು.

ಕವಿತೆಯ ಪ್ರಾರಂಭ ಈ ದ್ವಂದ್ವಗಳನ್ನು ಕಾವ್ಯಮಯವಾಗಿಯೇ ನಿರೂಪಿಸುತ್ತದೆ. ಮಿಂಚಿ ಮೂಡಿದ ಮಾಳ್ಕೆಯ ಹೊಗರು-ಕಿಂಕರ್ತವ್ಯ ಮೂಢತೆಯ ಮಬ್ಬು, ಕುಲುಕುಲು ನಗುವ ನಂದನ-ಮುಳ್ಳಿಡಿದ ದೇಹದಾರಣ್ಯ, ತುಂಬಿ ಬೆಸಲಾದ ನಿಃಸೀಮ-ರೆಕ್ಕೆಗೊಲಿಯದ ಶೂನ್ಯ, ಹೀಗೆ. ಇದನ್ನು ಮೀರಿ ಬಾಳಬೇಕಾದರೆ ಪೂರ್ಣಜ್ಞಾನವೊಂದೇ ಪರಮೌಷಧ. ಆ ವಿಮೋಚನದ ಮಾರ್ಗದ ಸೂಚನೆ ಸಮರ್ಪಕವಾಗಿ ಶಕ್ತಿಯುತವಾಗಿ ಅಭಿವ್ಯಕ್ತಿಗೊಂಡಿದೆ:

ರಂಗ ರಂಗಗಳಲ್ಲಿ ಮೊಳಗಿ ಕಾಳಗಭೇರಿ
ಎಲ್ಲ ದ್ವಂದ್ವಗಳೊಡನೆ ದ್ವಂದ್ವಯುದ್ಧವ ಸಾರಿ
ಬದುಕುವುದು
ಇಲ್ಲ
ಮರಣ-ಮರಣದಾಚೆ ಇರಬಹುದಾದ
ಜನ್ಮಸ್ಥಲಗಳ ಕೆದಕುವದು,
ಯುದ್ಧಿಸುತ ಎಂದಿನಂತೆ!

ಆಗ ಕಾಯಕಲ್ಪ ಸಿದ್ಧವಾಗಿ ಬುದ್ಧಿಯ ವಿಕಲ್ಪವೂ ವಿಶುದ್ಧಗೊಳ್ಳುವದೆಂದು, ಅಂತರಾತ್ಮ ಪರಿಶುದ್ಧವೆಂದೂ ಕವಿಯ ಹೇಳಿಕೆ. ಹೀಗಾದಾಗ ಅಂತಃಸಮನ್ವಯವನ್ನು, ವಿಶ್ವದೊಂದಿಗೆ ಪೂರ್ಣ ಸಮರಸವನ್ನು, ಪರಾತ್ಪರದೊಡನೆ ಮಂಗಲ ಸ್ವಯಂವರವ

ಸಾಧಿಸಬಹುದಂತೆ. ಇದನ್ನು ಸಾಧಿಸಲು ಇರುವ ದಾರಿಗಳು ಎರಡು. ಒಂದು: ಒಂದೇ ವ್ರತವನ್ನು ಹಿಡಿದು, ಹೊಳೆಯಂತೆ ಗುರಿಯೊಂದನ್ನೇ ಗಮನದಲ್ಲಿಟ್ಟು ನಡೆಯುವುದು. ಇದಕ್ಕೆ ತಿಳಿವು, ಎದೆಯ ಶುಚಿ, ಉಸಿರ ದೊರೆತನ, ಧ್ಯಾನ ನೆರವಾಗಬಲ್ಲವು. ಎರಡು: ಬಹುತ್ವಧಾರಾಧನೆ. ಈ ಮಾರ್ಗವೇ ಕವಿ ಆರಿಸಿಕೊಂಡಿರುವದು. ಅದರಿಂದ

ದಶದಿಶೆಯನಲೆಯ ಬಯಸುವೆನು ಭಾಸ್ಕರನಂತೆ.
ನಾದ-ಬಿಂದುಗಳ ಬಾಜಾರ ಹಿರಿ ಹಿಗ್ಗೆನಗೆ.
ಮೂರುವರ್ಣವೈಖರಿ ಜ್ಯೋತಿಯಾಗಿ ಪಲ್ಲವಿಸುವ
ವೃಕ್ಷದೆದುರು ಕೈಜೋಡಿಸಿ ನಿಲುವೆ ಧ್ಯಾನಿಯಂತೆ.
ಮಾಳ್ಕೆ ನನಗಾತ್ಮ ದರ್ಪವೆಂದು ಬಗೆದಿಹೆನು.
ಜ್ಞಾನ ದಿಗಂತದಾಚೆ ಬೆನ್ನಟ್ಟಿದ ತಾರೆ
ನವರಸಗಳಂತೆ ಪ್ರಿಯವಿವಹವು ನವವಿಧ ಭಕ್ತಿ.

ಏಕಮಾರ್ಗೀಯ ಅಮೃತನಾಡಿಗೆ ನೇರ ಹಾರುಹೆಜ್ಜೆ ಹಾಕಿ ಬೇಗ ಗುರಿ ಸೇರಿದರೆ ಬಹುತ್ವದಾರಾಧಕನು ವಿವಿಧ ಹಂತಗಳಲ್ಲಿ ಲೀಲಾವಿಲಾಸದಿಂದ ಅಲೆದಾಡುವನು. ಗುರಿಸೇರುವುದು ತಡವಾದರೂ ವಿಶ್ವದ ವಿಶಾಲಾನುಭವದಲ್ಲಿ ವಿಸ್ತಾರ ಪಡೆಯುತ್ತಾನೆ.

ಸಾವಧಾನದಿ ನಡೆದು ಬಹುತ್ವ ಪ್ರಿಯನೈತರುವ
ಅಮೃತನಾಡಿಗೆ, ತನ್ನ ದೈವದ ಹಣ್ಣು ಬಿರಿದಿರಲು.

ಬಹುತ್ವದಾರಾಧಕನನ್ನು ಅರುಣನ ಪ್ರತಿಮೆಯ ಮೂಲಕ ಕೊನೆಗೆ ಹೀಗೆ ಸೆರೆಹಿಡಿಯಲಾಗಿದೆ.

ಏಳು ಕುದುರೆಗಳನ್ನು ಹೂಡಿ ಕತ್ತಲೆಯಲ್ಲಿಯೆ
ಹೆಣಗುತಿಹ ಹೆಳವ ಈಡಾಗಿ ಗ್ರಹಗಳ ನಗೆಗೆ.
ಆದರರುಣನಿಗಿಹುದು ಸೂರ್ಯೋದಯದ ಸಾರಥ್ಯ.
ಐದು ದಾರಿಗಳನಾರಯ್ದು ಐತರುವನವ,
ಕರ್ಮ, ಭಕ್ತಿ, ಜ್ಞಾನ, ಧ್ಯಾನ, ಹಠವೆಂಬವನು.

ಇಡಿಯ ಕವಿತೆ ಅರವಿಂದರ ಪೂರ್ಣಯೋಗದ ಪ್ರತಿಪಾದನೆಗೆ ಮೀಸಲಾದಂತಿದೆ. ಅಲ್ಲಲ್ಲಿ ಕಾವ್ಯದ ಹೊಳಹು ಕಂಡುಬರುತ್ತಿದ್ದರೂ ಹೇಳಿಕೆಗಳೇ ಪ್ರಧಾನ ಸ್ಥಾನ ಪಡೆದಿವೆ. ಹೇರಳವಾದ ಆಧ್ಯಾತ್ಮಿಕ ಪಾರಿಭಾಷಿಕಪದಗಳ ಅನಿವಾರ್ಯ ಬಳಕೆಯೂ ಇದಕ್ಕೆ ಕಾರಣವಾಗಿರಬಹುದು.

೬

ಈ ಐದು ನೀಳ್ಗವನಗಳ ಮುಖ್ಯ ಆಶಯವನ್ನು ಕಂಡುಕೊಳ್ಳುವ ಪ್ರಯತ್ನದಲ್ಲಿ ವಿನಾಯಕರ ವಿಶಿಷ್ಟ ವ್ಯಕ್ತಿತ್ವದ ಅಭಿವ್ಯಕ್ತಿಗಳಾಗಿ ಇವು ಗೋಚರಿಸುತ್ತವೆ. ಭಾರತೀಯ ಪರಂಪರಾಪ್ರಜ್ಞೆಯನ್ನು ವಿಕಸನಶೀಲ ದೃಷ್ಟಿಯಿಂದ ನವ್ಯವಾಗಿಸುವುದು ಅವರ ಕಾವ್ಯದ ರೀತಿಯಾಗಿದೆ. ಜಿಜ್ಞಾಸೆಯೇ ಅದರ ಜೀವಾಳವೆನ್ನಬಹುದು. ಜೀವನದ ಸಮಗ್ರತೆಯನ್ನು

ಕಂಡುಕೊಂಡು, ವೈವಿಧ್ಯವನ್ನು ಸಮನ್ವಯಗೊಳಿಸುತ್ತ ಸಮರಸವನ್ನು ಸಾಧಿಸುವುದೇ ಅದರ ಗುರಿ. ಸಾಂಕೇತಿಕತೆಯಿಂದ ಅರ್ಥವಿಸ್ತಾರ ಪಡೆಯುವ ಸಂಕೀರ್ಣಶೈಲಿ ಮುಕ್ತ ಛಂದದಲ್ಲಿ ಪರಿಣತಿ ಪಡೆದಿರುವುದನ್ನು ಕಾಣುತ್ತೇವೆ. ಕಾವ್ಯವನ್ನು ಗೇಯತೆಯಿಂದ ಬಿಡಿಸಿ ಮಾತಿನ ಬಂಧಕ್ಕೆ, ಗದ್ಯದ ಹತ್ತಿರಕ್ಕೆ ತಂದ ಆಧುನಿಕ ಕನ್ನಡ ಕವಿಗಳಲ್ಲಿ ವಿನಾಯಕರು ಪ್ರಥಮರೆಂಬುದನ್ನು ಇಲ್ಲಿ ನೆನೆಯಬೇಕು. "ವಿನಾಯಕರು ಪ್ರವಾಸಸ್ಫೂರ್ತ ಕವಿ... ಹೊಸಕಾವ್ಯ ಪ್ರಜ್ಞೆಗೂ ಅದು ಕಾರಣವಾಗುತ್ತದೆ". ಎಂಬ ಜಿ.ಎಸ್. ಶಿವರುದ್ರಪ್ಪನವರ ಮಾತನ್ನು ಈ ಕವನಗಳ ಸಂದರ್ಭದಲ್ಲಿಯೂ ನೆನೆಯಬಹುದು. ಕಥನದ ತಂತ್ರವನ್ನು ಅನುಸರಿಸುವುದರಿಂದ ಈ ಕವನಗಳಿಗೆ 'ನೀಳ್ಗವನ'ಗಳೆಂದು ಕರೆದಿರುವಂತೆ ತೋರುತ್ತದೆ. 'ಅಥೆಂಟಿಸಿಟಿಯ ಪರಿಶೋಧನ' ಎಂಬ ಮಾತು ಗ್ರಂಥದ ಮುನ್ನುಡಿಯಲ್ಲಿ ಬಂದಿದೆ. ಈ ಕವನಗಳು ಅದಕ್ಕೆ ತಕ್ಕ ನಿದರ್ಶನಗಳಾಗಿವೆಯೆಂದೂ ಹೇಳಬಹುದು. ಅಂತರಂಗ ಶೋಧನೆಯ ಮೇಲೆ ಒತ್ತು ಕೊಡುವುದು ಮೊದಲಿನಿಂದಲೂ ಅವರ ಕಾವ್ಯದ ಒಂದು ಅಂಶವಾಗಿದೆ. ಈ ಕವನಗಳಲ್ಲಿ ಅದೇ ಪ್ರಧಾನವಾಗಿ ಬೆಳವಣಿಗೆ ಪಡೆದಿದೆ.

ನವ್ಯತೆಯ ಸಂದರ್ಭದಲ್ಲಿ ವಿನಾಯಕರು ತೆರೆದು ತೋರಿದ ಮಾರ್ಗದಲ್ಲಿ ರಚಿತವಾದ ಅತ್ಯುತ್ತಮ ಕವನಗಳನ್ನು ಆಯ್ಕೆಮಾಡುವ ಪ್ರಸಂಗ ಬಂದಲ್ಲಿ ಮತ್ತೆ ಅವರ ರಚನೆಗಳಿಗೇ ಮೊರೆಹೋಗಬೇಕಾಗುತ್ತದೆ. 'ಕೂಟ ನಿಲ್ದಾಣದ ಸೈಡಿಂಗ್‌ನಲ್ಲಿ', 'ಪಂಡಿತಾಃ ಸಮದರ್ಶಿನಃ ' 'ಕಾವೇರಿಯ ತರಂಗಾಂತರಂಗ' ಕವಿತೆಗಳು ಇದಕ್ಕೆ ಉತ್ತಮ ಉದಾಹರಣೆಗಳಾಗಿವೆ.

'ಆವಿಷ್ಕರಣ' ೧೯೮೯

೩೫

# ಕುವೆಂಪು ಕಾವ್ಯ : ಒಂದು ಸೃಜನಶೀಲ ಪ್ರತಿಕ್ರಿಯೆ

ನಾನು ಹಾಯಸ್ಕೂಲಿನಲ್ಲಿ ಓದುತ್ತಿದ್ದಾಗ (೧೯೪೦-೪೫) ನನ್ನ ಕಿವಿಯ ಮೇಲೆ ಆಗಾಗ ಬಿದ್ದು ತನ್ಮಯತೆಯನ್ನುಂಟುಮಾಡುತ್ತಿದ್ದ ಕುವೆಂಪು ಕವಿತೆಗಳಲ್ಲಿ

ಜ್ಯೋತ್ಸ್ನ ತುಂಬಿ ತುಳುಕಿ ಹರಿಯೆ
ಸ್ನಿಗ್ಧ ಶರತ್ಕಾಲದಿ
ಮುಗಿಲು ರಂಗವಲ್ಲಿ ಬರೆಯೆ
ವ್ಯೋಮ ಪಟದ ನೀಲದಿ
..............................
ಅಗಣಿತ ತಾರಾಗಣಗಳ ನಡುವೆ
ನಿನ್ನನೆ ನೆಚ್ಚಿಹೆ ನಾನು
ನನ್ನೀ ಜೀವನ ಸಮುದ್ರಯಾನಕೆ
ಚಿರಧ್ರುವ ತಾರೆಯು ನೀನು
..................................
ದೋಣಿ ಸಾಗಲಿ, ಮುಂದೆ ಹೋಗಲಿ
ದೂರ ತೀರವ ಸೇರಲಿ,
ಬೀಸುಗಾಳಿಗೆ ಬೀಳುತೇಳುತ
ತೆರೆಯ ಮೇಗಡೆ ಹಾರಲಿ.

ಇವೇ ಮೊದಲಾದ ಪದ್ಯಗಳು ಸೇರಿದ್ದವು. ಧಾರವಾಡದಲ್ಲಿ ನಡೆಯುತ್ತಿದ್ದ ಸಭೆ ಸಮಾರಂಭಗಳಲ್ಲಿ ಪಿ.ಆರ್. ಭಾಗವತ ಹಾಡುತ್ತಿದ್ದ ಭಾವಗೀತಗಳಲ್ಲಿ ಕೆ.ವಿ. ಪುಟ್ಟಪ್ಪನವರ (ಆಗಿನ್ನೂ 'ಕುವೆಂಪು' ಕಾವ್ಯನಾಮ ಪ್ರಚಲಿತವಾಗಿರಲಿಲ್ಲ) ಈ ಪದ್ಯಗಳೂ ಗಾಳಿಯಲ್ಲಿ ತೇಲಿ ಬರುತ್ತಿದ್ದವು. ಅವುಗಳ ಭಾವ, ಭಾಷೆ ಹಾಗೂ ಲಯದ ಸೊಗಸು ಮನಸ್ಸನ್ನು ತುಂಬಿ, ತೂಗಿಸುತ್ತಿತ್ತು.

'ಶ್ರೀ'ಯವರ 'ಕನ್ನಡದ ಬಾವುಟ' ೧೯೪೦ರಲ್ಲಿಯೇ ನನ್ನ ಕೈಗೆ ಸಿಕ್ಕಿತ್ತು. ಆಧುನಿಕ ಕವಿಗಳ ಹೊಸ ಕವಿತೆಗಳ ಕಡೆಗೆ ನನ್ನ ಲಕ್ಷ್ಯವನ್ನು ಮೊಟ್ಟ ಮೊದಲು ಸೆಳೆದ ಆ ಕವನ

ಸಂಗ್ರಹದಲ್ಲಿ ನನ್ನ ಮನಸ್ಸನ್ನು ವಿಶೇಷವಾಗಿ ಆಕರ್ಷಿಸಿದ್ದ ಪದ್ಯಗಳಲ್ಲಿ ಪುಟ್ಟಪ್ಪನವರ 'ನವೀನ' ಹಾಗೂ 'ಲಲಿತಾದ್ರಿ' ಮುಖ್ಯವಾಗಿದ್ದವು.

ನಾಡಿನ ಪುಣ್ಯದ ಪೂರ್ವ ದಿಗಂತದಿ
ನವ ಅರುಣೋದಯ ಹೊಮ್ಮುತಿದೆ.
.......................................
ನವೀನ ಹೃದಯಗಳೇಳಿ, ನವೀನ ಗಾನವ ಕೇಳಿ

ಈ ಸಾಲುಗಳು ನನಗರಿಯದಂತೆಯೇ ಕಾವ್ಯದ ಬಗ್ಗೆ ಅಪೂರ್ವವಾದ ಉತ್ಸಾಹವನ್ನು ನನ್ನಲ್ಲಿ ತುಂಬಿದವು. 'ಲಲಿತಾದ್ರಿ' ಪದ್ಯದ ಛಂದಸ್ಸಿನ ಓಟ, ಆವೇಶ, ವರ್ಣನಾತ್ಮಕ ಪ್ರತಿಭೆ ಅದನ್ನು ಒಂದೇ ಉಸಿರಿನಲ್ಲಿ ಓದುವ ಹಾಗೆ ಮಾಡುತ್ತಿತ್ತು.

ಈ ಪದ್ಯಕ್ಕೆ ಸಂಬಂಧಪಟ್ಟಂತೆ ಒಂದು ಘಟನೆಯನ್ನು ನಾನಿಲ್ಲಿ ಹೇಳಬೇಕು. ೧೯೪೨ರಲ್ಲಿ ನಮ್ಮ ಶಿಕ್ಷಕರೊಬ್ಬರು ನಾವು ಕೆಲವು ವಿದ್ಯಾರ್ಥಿಗಳನ್ನು ಮೈಸೂರಿನ ಪ್ರವಾಸಕ್ಕೆ ಕರೆದುಕೊಂಡು ಹೋಗಿದ್ದರು. ಅದು ದಸರಾ ಉತ್ಸವದ ಸಂದರ್ಭವೂ ಆಗಿತ್ತು. ಮೈಸೂರನ್ನು ನಾನು ನೋಡಿದ್ದು ಅದೇ ಮೊದಲು. ಉಡುಗೆ-ತೊಡುಗೆ ಮಾತು ಕತೆ, ಊಟ-ನೋಟ ಎಲ್ಲದರಲ್ಲೂ ಅದು ತೀರ ಭಿನ್ನವಾಗಿ ಆದರೆ ರಮ್ಯಮನೋಹರವಾಗಿ ನನಗೆ ಕಂಡಿತು. ಅಲ್ಲಿಯ ಪ್ರೇಕ್ಷಣೀಯ ಸ್ಥಳಗಳನ್ನು ಒಂದೊಂದಾಗಿ ನೋಡಿದ್ದಾಯಿತು. ಆದರೆ ನನಗೆ 'ಲಲಿತ ಲಲಿತಾದ್ರಿಯಲಿ ನಿಂತು ನೋಡು' ಎಂಬ ಪುಟ್ಟಪ್ಪನವರ ಕವಿತೆಯ ಸಾಲನ್ನು ಪ್ರತ್ಯಕ್ಷಮಾಡಿಕೊಳ್ಳುವ ಹಂಬಲ ತೀವ್ರವಾಗಿತ್ತು. ಚಾಮುಂಡಿ ಬೆಟ್ಟಕ್ಕೆ ಹೋದಾಗ ಅದರ ಸಮೀಪದಲ್ಲಿಯೇ ಇದ್ದ 'ಲಲಿತಾದ್ರಿ'ಯನ್ನು ಒಂದಿಬ್ಬರು ಗೆಳೆಯರೊಡನೆ ಸಂದರ್ಶಿಸಿದಾಗ ನನ್ನ ಸಂತೋಷಕ್ಕೆ ಪಾರವೇ ಇರಲಿಲ್ಲ.

ತಾರೆಗಳ ದಿಬ್ಬಣವು
ಗಗನದಿಂದಿಳಿತಂದು
ಬೆಟ್ಟದುದಿಯಲಿ ತಳುವಿ
ಸೋಪಾನಗಳನಿಳಿದು
ತಪ್ಪಲಲಿ ಮೇಳವಿಸಿ
ಕವಿದು ಕಿಕ್ಕಿರಿದಂತೆ

'ಸಿಂಗರದ ಮೈಸೂರ'ನ್ನು ಕಣ್ತುಂಬ ಕಾಣುತ್ತಿದ್ದಂತೆ ಇಡೀ ಪದ್ಯ ನನ್ನ ಕಣ್ಣೆದುರು ಪ್ರತ್ಯಕ್ಷವಾಗಿ ಒಂದು ಅಪೂರ್ವ ಅನುಭವ ನನಗುಂಟಾದುದನ್ನು ನಾನಿಂದಿಗೂ ಮರೆತಿಲ್ಲ.

'ಕಾನೂರು ಸುಬ್ಬಮ್ಮ ಹೆಗ್ಗಡಿತಿ' ಮೂರು-ನಾಲ್ಕು ಬಾಗಗಳಲ್ಲಿ ಪ್ರಕಟವಾಗುತ್ತ ಬಂದಂತೆಯೇ ಓದಿ ಮುಗಿಸುತ್ತ ಬಂದೆ. ಬಯಲು ಸೀಮೆಯಲ್ಲಿ ಬೆಳೆದ ನನ್ನನ್ನು ಮಲೆನಾಡಿನ ಭವ್ಯವಾದ ಬೇರೊಂದು ಪ್ರಪಂಚಕ್ಕೆ ಕರೆದುಕೊಂಡು ಹೋದಂತ್ತಿತ್ತು.

‘ಸ್ವಾಮಿ ವಿವೇಕಾನಂದ’ ಗ್ರಂಥದ ಮೊದಲ ಅಧ್ಯಾಯದ ‘ಯಾರಿವನು’ ಭಾಗವನ್ನು ನನ್ನಷ್ಟಕ್ಕೆ ಗಟ್ಟಿಯಾಗಿ, ನಾಟಕೀಯವಾಗಿ ನಾನು ಆಗ ಎಷ್ಟೋ ಸಲ ಓದಿದ್ದುಂಟು. ಎಳವರಯದಲ್ಲಿ ಕುವೆಂಪು ಕೃತಿಗಳ ಆ ಓದಿನಿಂದ ಒಂದು ಬಗೆಯ ರಸಾವೇಶ ನನ್ನಲ್ಲೂ ಉಂಟಾಗಿ ಬಗೆ ತುಡಿಯುತ್ತಿತ್ತು. ನಿಸರ್ಗಪ್ರೀತಿ, ನಾಡು-ನುಡಿಯ ಅಭಿಮಾನ ನನ್ನಲ್ಲಿ ಜಾಗೃತಗೊಂಡವು.

ಕುವೆಂಪು ಕಾವ್ಯಕ್ಕೆ ನನ್ನ ಸೃಜನಶೀಲ ಪ್ರತಿಕ್ರಿಯೆ ಯಾವ ರೀತಿಯಾಗಿತ್ತು? ಈಗ ವಿಚಾರ ಮಾಡಿದಾಗ ನನಗನ್ನಿಸುತ್ತದೆ: ಅವರ ಕಾವ್ಯದ ಛಂದೋಲಯ ಹಾಗೂ ಭಾಷಾಶೈಲಿಯಿಂದ ನಾನು ಪ್ರಭಾವಿತನಾದೆ.

‘ಅಡಿಯ ಗೆಜ್ಜೆ ನಡುಗೆ ಹೆಜ್ಜೆಯಿಡುತ ಸುಗ್ಗಿ ಬರುತಿದೆ’

* * *

‘ಜೀವನ ವನದಲಿ ಕವನ ಮಯೂರಂ
ನಿಖಿಲ ಭುವನ ಮನ ನಯನವಿಹಾರಂ
ಕಲ್ಪನೆ ಕಂಗಳ ಸಾಸಿರನೂರಂ
ತೆರೆದು ಕುಣಿವುದಾವೇಶದಲಿ’

ಧಾರವಾಡದ ಕಡೆಯ ಕೆಲವು ಕಾವ್ಯಪ್ರೇಮಿಗಳನ್ನು ಕುವೆಂಪು ಅವರ ಈ Majestic Style ಮರುಳುಗೊಳಿಸಿದ್ದಿತು. ಹೀಗೆ ಗಂಭೀರ ಶೈಲಿಯಲ್ಲಿ ಬರೆದರೇ ಅದು ಕಾವ್ಯ ಎನ್ನುವ ಅಭಿಪ್ರಾಯವೂ ಒಂದು ವರ್ಗದ ಓದುಗರಲ್ಲಿತ್ತು. ಆದರೆ ನಾನು ಅದೇ ಹೊತ್ತಿಗೆ ಬೇಂದ್ರೆ, ಮಧುರಚೆನ್ನರ ಕವಿತೆಗಳನ್ನು ಓದಿ ಮೆಚ್ಚಿಕೊಂಡವನಾದ್ದರಿಂದ ಒಬ್ಬೊಬ್ಬ ಕವಿಯದೂ ಒಂದೊಂದು ವೈಶಿಷ್ಟ್ಯವೆಂದೇ ನಾನು ಗುರುತಿಸಿದ್ದೆ. ನಾನು ಕಾವ್ಯ ರಚನೆಗೆ ತೊಡಗಿದಾಗ ಈ ಬಗೆಯ ವೈಶಿಷ್ಟ್ಯವನ್ನುಳಿಸಿಕೊಳ್ಳುವುದರತ್ತಲೆ ನನ್ನ ಗಮನವನ್ನು ಹರಿಸಿದ್ದೆ. ಕುವೆಂಪು ಮಲೆನಾಡನ್ನು ಪ್ರೀತಿಸಿದ ಹಾಗೆ, ಅದರ ರುದ್ರ-ರಮಣೀಯತೆಯನ್ನು ದರ್ಶನ ಮಾಡಿಸಿದ ಹಾಗೆ, ನಾನು ನನ್ನ ಬೆಳುವೊಲ ನಾಡನ್ನು ಪ್ರೀತಿಸಬೇಕು, ಅದರ ಚೆಲುವನ್ನು ತೆರೆದು ತೋರಿಸಬೇಕು ಎಂಬ ಪ್ರೇರಣೆ ನನ್ನಲ್ಲುಂಟಾಯಿತು. ಇದರಿಂದ ಕುವೆಂಪು ಶೈಲಿಯನ್ನು ಅನುಕರಣೆ ಮಾಡದೆ ಆ ಮೂಲಕ ಅದ್ಭುತವಾಗಿ ಅಭಿವ್ಯಕ್ತಿಗೊಂಡ ಅವರ ನಿಸರ್ಗೋಪಾಸನೆಯನ್ನು ಅರಗಿಸಿಕೊಳ್ಳುತ್ತಲೇ ದಾರವಾಡದ ‘ದೇಸಿ’ಗೆ ನಾನು ಸಹಜವಾಗಿಯೇ ಒಲಿದೆ.

ಕುವೆಂಪು ಅವರ ‘ಲಲಿತಾದ್ರಿ’ ಪದ್ಯದ ಬಗ್ಗೆ ಮೇಲೆ ಹೇಳಿದೆನಲ್ಲವೇ? ಮುಂದೆ ಏಳೆಂಟು ವರ್ಷಗಳ ನಂತರ (ನಾನಾಗ ಬಿ.ಎ.ದಲ್ಲಿ ಓದುತ್ತಿದ್ದೆ) ‘ಪ್ರಕೃತಿಯ ಮಡಿಲಲ್ಲಿ’ ಎಂಬ ದೀರ್ಘ ಕವಿತೆಯನ್ನು ನಾನು ಬರೆದೆ. ದಾರವಾಡದ ಕರ್ನಾಟಕ ಕಾಲೇಜಿನ ಅಟ್ಟದ ಮೇಲಿಂದ ಕಾಣುವ ನಾಲ್ಕುನಿಟ್ಟಿನ ನೋಟವನ್ನು ಬಣ್ಣಿಸುವ ನನ್ನ ಆ ಕವಿತೆ ೧೯೫೦ರಲ್ಲಿ ಮಾಸ್ತಿಯವರ ‘ಜೀವನ’ ಪತ್ರಿಕೆಯಲ್ಲಿ ಪ್ರಕಟಗೊಂಡಿತು. ಅದಕ್ಕೆ ಪ್ರೇರಣೆ ‘ಲಲಿತಾದ್ರಿ’

ಯಿಂದಲೆ ಒದಗಿದ್ದರೂ ದಾರವಾಡದ ನಿಸರ್ಗ ಪರಿಸರವನ್ನೂ ಭಾಷೆಯ ನುಡಿಕಟ್ಟನ್ನೂ ಒಳಗೊಂಡ ಒಂದು ಪ್ರಯೋಗ ಅಲ್ಲಿದೆ ಎನಿಸಿತು.

ಕುವೆಂಪು ಅವರ 'ಕೃತ್ತಿಕೆ' ೧೯೪೬ರಲ್ಲಿ ಹೊರಬಂದಿತು. ಅಲ್ಲಿಯ ಸಾನೆಟ್ಟುಗಳ ನ್ನೋದಿದಾಗ ನನ್ನ ಅಭಿವ್ಯಕ್ತಿಗೆ ಹೊಸ ಕಾವ್ಯ ಪ್ರಕಾರವೊಂದು ಆ ಮೂಲಕ ನನಗೆ ಗೋಚರಿಸಿದಂತಾಯಿತು. ಅದೇ ಕಾಲಕ್ಕೆ ಅಥವಾ ಅದಕ್ಕೂ ಮೊದಲು ಬೇಂದ್ರೆಯವರ 'ಉಯ್ಯಾಲೆ'ಯಲ್ಲಿ ಕನ್ನಡಕ್ಕೆ ಒಗ್ಗಿಸಿಕೊಂಡ ಭಿನ್ನರೀತಿಯ ಅಷ್ಟಷಟ್ಪದಿಗಳನ್ನೂ ನೋಡಿದ್ದೆ. ಇವೆರಡರ ಸಮನ್ವಯ ಸಾಧ್ಯ ಎನ್ನಿಸಿ ಆ ಪ್ರಕಾರದಲ್ಲಿ ಬೇರೆ ಬೇರೆ ಪ್ರಯೋಗಗಳನ್ನು ಮಾಡುತ್ತ ಆ ಕಲಾತ್ಮಕ ಬಾಂಧವ್ಯದ ಸಾಧ್ಯತೆಗಳನ್ನು ಕಂಡುಕೊಳ್ಳುವ ಪ್ರಯತ್ನ ನನ್ನಿಂದ ಈಗಲೂ ಮುಂದುವರೆದಿದೆ. ಈ ದಿಶೆಯಲ್ಲಿ ವಿಶೇಷವಾಗಿ ಕಂಡು ಬರುವ ನನ್ನ ಕಸಬುದಾರಿಕೆಯ ಪರಿಣತಿಯನ್ನು ಕನ್ನಡ ವಿಮರ್ಶೆ ಈಗಾಗಲೇ ಗುರುತಿಸಿದೆ.

ಕುವೆಂಪು ಅವರ ಭಾಷೆ, ಶೈಲಿ 'ಸಂಸ್ಕೃತ ಭೂಯಿಷ್ಠ' ಎನ್ನುವ ಮಾತು ಆಗ ವಾಡಿಕೆಯಲ್ಲಿರಲಿಲ್ಲ. ಆಮೇಲೆ ಕೆಲವು ವಿಮರ್ಶಕರು ಅದನ್ನು ಕ್ಲೀಷೆಯಾಗಿ ಬಳಸುತ್ತ ಬಂದರೂ ನನಗೆ ವೈಯಕ್ತಿಕವಾಗಿ ಅದು ಸರಿಯಾದ ಅಭಿಪ್ರಾಯವೆನಿಸಲಿಲ್ಲ. ಕುವೆಂಪು ಭಾಷೆ ಹಳಗನ್ನಡ, ಸಂಸ್ಕೃತ ಹಾಗೂ ಹೊಸಗನ್ನಡದ ಒಂದು ಲಲಿತ ಮಿಶ್ರಣ ಅಥವಾ ಪಾಕ. 'ರಾಮಾಯಣ ದರ್ಶನ'ದಲ್ಲಿ ಅದರ ಪಕ್ವತೆಯನ್ನು ಕನ್ನಡಕ್ಕೇ ಅಪೂರ್ವವಾದ ಒಂದು ವಿಶಿಷ್ಟ ಭಾಷಾಸಿದ್ಧಿಯನ್ನು, ಮಹಾ ಛಂದಸ್ಸಿನ ಒಂದು ವೈಭವವನ್ನು ಅಲ್ಲಿ ಕಾಣಬಹುದಾಗಿದೆ.

ಕನ್ನಡವನ್ನೂ ಸಂಸ್ಕೃತವನ್ನೂ ಮುಖಾ-ಮುಖಿಯಾಗಿಸಿ ಒಂದು ಹೊಸ ಲಯವನ್ನು, ಸೌಂದರ್ಯವನ್ನು ಗೋಚರಿಸುವಂತೆ ಮಾಡುವ ವಿಧಾನ ಕುವೆಂಪು ಅವರ ಕೆಲವು ಕವಿತೆಗಳಲ್ಲಿ ಪರಿಣಾಮಕಾರಿಯಾಗಿ ಬಂದಿದೆ. ಉದಾಹರಣೆಗೆ 'ಇಬ್ಬನಿಯವತಾರ' ಕವಿತೆಯ ಈ ಸಾಲುಗಳು:

ಬರಿ ಹನಿಯಲ್ಲಿದು : ಸ್ವರ್ಗಾದೇಶಂ
ಬರಿ ಹೊಳಪಲ್ಲಿದು : ದಿವ್ಯಾವೇಶಂ

ಕುವೆಂಪು ಕವಿತೆಗಳ ಶಿಲ್ಪವನ್ನು ಪರಿಶೀಲಿಸಿದಾಗ ಇದು ಇನ್ನೂ ಹೆಚ್ಚು ಸ್ಪಷ್ಟವಾಗುತ್ತದೆ. ಸಂಸ್ಕೃತ ಹಾಗೂ ಕನ್ನಡದ ಹಿತಮಿತ ಬಂಧ ಕೇವಲ ಪದಗಳಲ್ಲಿ ಮಾತ್ರವಲ್ಲದೆ ಪದ್ಯದ ಚರಣಗಳಲ್ಲಿಯೂ ಒಂದರ ಹಿಂದೊಂದು ಬಂದು ಬಂಧವನ್ನು ಬಿಗಿಗೊಳಿಸುತ್ತ ಆಶಯಕ್ಕೆ ತಕ್ಕ ಆಕೃತಿಯನ್ನು ರೂಪಿಸಿಕೊಳ್ಳುತ್ತವೆ.

ಉದಾಹರಣೆಗೆ:

೧. ಜ್ಯೋತ್ಸ್ನೆ ತುಂಬಿ ತುಳುಕಿ ಹರಿಯೆ
ಸ್ನಿಗ್ಧ ಶರತ್ಕಾಲದಿ

೨. ಅನಂತದಿಂ, ದಿಗಂತದಿಂ
ಅನಂತ ತಾ ದಿಗಂತದಿಂ
ನೋಡೆ ನೋಡೆ ಮೂಡಿತೊಂದು ಮೋಡ ಗೋಪುರ

೩. ಆಕ್ರಮಿಸು ಬಂದೆನ್ನ ಅಲ್ಪತ್ವಮಂ ಓ ಅನಂತ!
ಬಾಳರಳಿ ಬದುಕುರುಳಿ ಸಿದ್ಧಿಸುವವೋಲ್ ನಿರ್ದಿಗಂತ.
ಪಾಪೊಡವೆ, ಬೆಂಕೆಗಣ್, ಗಂಗೆಮುಡಿ
ಓ ಬಾರ ವ್ಯೋಮಕೇಶ!

೧. ರಲ್ಲಿ 'ತುಳುಕಿ ಹರಿಯು'ವದನ್ನು ತಡೆಗಟ್ಟುವ ಹಾಗೆ ಎರಡನೆಯ ಸಾಲಿನ ಸಂಸ್ಕೃತ ಪದಗಳು ಮನನಕ್ಕೆ ಎಡೆಮಾಡಿ ಕೊಡುತ್ತವೆ.

೨. ರಲ್ಲಿ ಸಂಸ್ಕೃತ ಪದಗಳ ಮೂಲಕ 'ಅನಂತ' ಅನುರಣನಗೊಳ್ಳುತ್ತಿರುವಾಗ ಮೋಡಗೋಪುರ ಹಗುರವಾಗಿ ಮೂಡಿ ಮೇಲೇರುವ ಕ್ರಿಯೆಯನ್ನು ಎರಡನೆಯ ಸಾಲು ನಾಟ್ಯೀಕರಿಸುತ್ತದೆ.

೩. ರಲ್ಲಿ ಮೂರನೆಯ ಸಾಲಿನಲ್ಲಿಯ ಅಚ್ಚಗನ್ನಡ ಪದಗಳು ಈಗ ಬಳಕೆಯಲ್ಲಿಲ್ಲದಿದ್ದರೂ ಅಲ್ಪತ್ವವನ್ನು ಹೋಗಲಾಡಿಸಿ ಮಹತ್ತನ್ನು ಆಹ್ವಾನಿಸುವ ಭಾವಕ್ಕೆ ಹೆಚ್ಚಿನ ಪುಷ್ಟಿಯನ್ನು ನೀಡುವ ಶಕ್ತಿಯನ್ನು ಪಡೆದಿವೆ.

ಚಿತ್ರಗಳ ಮೇಲೆ ಚಿತ್ರಗಳನ್ನು ತೋರಿಸುತ್ತ, ವರ್ಣನೆಯಿಂದ ಅವುಗಳಿಗೆ ಬಣ್ಣದುಂಬುತ್ತ, ಭಾವೋತ್ಕಟತೆಯಿಂದ ಅನುಭವದ ಅನನ್ಯತೆಯನ್ನು ಒಂದಲ್ಲ ಹತ್ತು ಮುಖಗಳಲ್ಲಿ ಒತ್ತಿ ಹೇಳುವ ಕುವೆಂಪು ಕಾವ್ಯದ ರಚನಾ ವಿಧಾನವನ್ನು ಅರ್ಥಮಾಡಿಕೊಂಡರೆ ಅವರ ಶೈಲಿ ಅಪರಿಚಿತ ಅಥವಾ ಅಸಹಜ ಎನಿಸಲಾರದು. ಈ ಸಂದರ್ಭದಲ್ಲಿ ಮಿಡಲ್‌ಟನ್ ಮರ್‍ರಿ ಎಂಬ ವಿಮರ್ಶಕ ಹೇಳಿದ ಒಂದು ಮಾತನ್ನು ಗಮನದಲ್ಲಿಡುವುದು ಒಳ್ಳೆಯದು: “To dismiss a style because it is unfamiliar is unpardonable”.

'ಚಿಂತಾಮಣಿ' ೨೦೦೫

೩೬

## ವೀಚಿಯವರ ಕಾವ್ಯ : ಒಂದು ಅವಲೋಕನ

ತಮ್ಮ ಬೇಸಾಯ ವೃತ್ತಿಯೊಂದಿಗೆ ಕಾವ್ಯ ಕೃಷಿಯನ್ನೂ ಅಷ್ಟೇ - ಅಥವಾ ಅದಕ್ಕೂ ಹೆಚ್ಚಿನ-ಶ್ರದ್ಧೆಯಿಂದ ನಿರ್ವಹಿಸುತ್ತ ಬಂದಿರುವ ವೀಚಿಯವರ ಸಂಯಮ-ಸಾಧನೆ ಮೆಚ್ಚುವಂಥದು. ಕಳೆದ ಮೂರು ದಶಕಗಳಲ್ಲಿ ಪ್ರಕಟವಾಗಿರುವ ಅವರ ನಾಲ್ಕು ಕವನಸಂಗ್ರಹಗಳೇ ಇದಕ್ಕೆ ಸಾಕ್ಷಿಯಾಗಿವೆ. ನವೋದಯ, ನವ್ಯ ಹಾಗೂ ಆನಂತರದ ಕನ್ನಡ ಕಾವ್ಯ ಸಂದರ್ಭಗಳಲ್ಲಿ ಅವರ ಕಾವ್ಯ ತನ್ನ ಬೆಳವಣಿಗೆಯ ವಿವಿಧ ಹಂತಗಳನ್ನು ದಾಟುತ್ತ 'ನವಿಲ ಮನೆಯಲ್ಲಿ' ಒಂದು ನೆಲೆಯನ್ನು ಕಂಡುಕೊಂಡಂತಿದೆ. ಜೀವನದ ವಿವಿಧ ಕ್ಷೇತ್ರಗಳ ಅನುಭವದ ಹಿನ್ನೆಲೆಯಲ್ಲಿ- ಕೌಟುಂಬಿಕ, ಸಾಮಾಜಿಕ, ರಾಜಕೀಯ-ಅವರ ಕಾವ್ಯ ವಸ್ತು ವೈವಿಧ್ಯದೊಂದಿಗೆ ಹಿಗ್ಗಿದಾಗಲೂ ಜೀವನದ ಮಾಗುವಿಕೆಯಲ್ಲಿಯೇ ಅದು ತನ್ನತನವನ್ನು ಕಂಡುಕೊಳ್ಳಲು ಹವಣಿಸಿರುವುದು ಗಮನಾರ್ಹವಾಗಿದೆ. ಪ್ರಕೃತಿ ಅವರಿಗೆ ಜೀವನೋತ್ಸಾಹದ ಚಿಲುಮೆಯಾಗಿ ಪರಿಣಮಿಸಿರುವಂತೆಯೇ ಪ್ರೀತಿ-ಪ್ರಣಯದ ಹಚ್ಚಹಸಿರು ದಾಂಪತ್ಯ ಕೃಷಿಯ ಸಾಲ ಸೋಲದಲ್ಲಿಯೂ ರಾಗದ ಹೊಂಬಿಸಲನ್ನು ಬಿಸಿಯಾರದಂತೆ ಹೊದ್ದುಕೊಂಡಿದೆ. ಒಂದು ಹಂತದಲ್ಲಿ ಇವರ ಕಾವ್ಯವಿಷಾದವನ್ನು ನೈಜವಾಗಿಯೆ ಅಭಿವ್ಯಕ್ತಿಗೊಳಿಸಿದ್ದರೂ ಅದು ಸ್ಥಾಯಿಯಾಗಿ ಉಳಿಯದೆ, ಮುಂದೆ ಒಂದು 'ಸಮರಸದ ಹದ'ದಲ್ಲಿ ರೂಪುಗೊಳ್ಳಲು ಪ್ರಯತ್ನಿಸಿದೆ.

ಪ್ರಾರಂಭದ ಕಾವ್ಯವಾದ 'ಪ್ರಣಯ ಚೈತ್ರ'ದಲ್ಲಿಯ ಅನುಭವ 'ಸರಳ ಏಕಮುಖ' ಎನಿಸಿದರೂ 'ಸಿದ್ಧಶೈಲಿ'ಯನ್ನೇ ಅವಲಂಬಿಸಿದ್ದರೂ ಪ್ರಣಯದ ಸ್ವರೂಪವನ್ನು ಮುಗ್ಧತೆಗೂ ಮೀರಿ ಮನಗಾಣುವ ಪ್ರಯತ್ನ ಕೆಲಮಟ್ಟಿಗೆ ನಡೆದಿದೆ:

ಹಳಬಳಾದರು ನಿನ್ನ ಹೊಸತನವು ಯಾರಿಗಿದೆ?
('ಬಾಳನ್ನು ನಡೆಸುವ ಪ್ರೇಮದೇವತೆಗೆ')

ಒಂದು ಬಾಳರ್ಪಿತವು ಮತ್ತೊಂದಕೆ
ಎಷ್ಟು ಬಗೆ ಸವಿಯಿಹುದು ಮುತ್ತೊಂದಕೆ ('ಪ್ರಣಯ ಸನ್ನಿಧಿ')

ನನ್ನದಲ್ಲೀ ನೇಹ, ನನ್ನದಲ್ಲೀ ಮೋಹ
ಜೀವ ಜೀವವು ಬಯಸಿದಂಥ ದಾಹ ('ಕೆಳೆಯರಿಗೆ')

ಪ್ರಣಯ ಸುಂಕವ ಕೊಟ್ಟು, ಪ್ರೇಮ ನಗರಿಯ ಹೊಕ್ಕು
ಕಂಡೆವದರಂದ ಚೆಂದಗಳನಂದು,
ಇಂದಿಗೂ ಯಾತ್ರಿಕರ ತೆರನಲ್ಲಿ ಸುತ್ತುವೆವು
ಸಂಧಿಸುವೆವೊಬ್ಬರೊಬ್ಬರನು ಬಂದು

('ದಿನಗಳೆಯುತಿರಲು')

'ವಿಷಾದನಕ್ಷೆ' ಸಂಗ್ರದಲ್ಲಿ ತಮ್ಮ ಕವಿತೆ ಬೆಳೆಯಬಹುದಾದ ದಿಕ್ಕನ್ನು ಗುರುತಿಸಿಕೊಳ್ಳಲು ಕವಿ ಹವಣಿಸಿದ್ದಾರೆ. ಸಾಮಾಜಿಕ ಜೀವನದ ಅಸ್ತವ್ಯಸ್ತತೆ, ದೇಶದಲ್ಲಿ ಕಲುಷಿತಗೊಂಡ ರಾಜಕೀಯ ವಾತಾವರಣ, 'ಯಾವ ನೆಲೆ ಹೊಕ್ಕು ಹೊರಬಂದರೂ ಬಿಡದ ಶೋಕ' 'ನಿರಾಸೆಯಲ್ಲಿ ಈಸಾಡಿ ಸೋತು ಬಡಕೊಳ್ಳುವ' ಸ್ಥಿತಿ ಇವುಗಳನ್ನು ಚಿತ್ರಿಸುವ ಹಂಬಲ ಇಲ್ಲಿ ಎದ್ದು ಕಾಣುತ್ತದೆ.

ರೋಗ ಚಹರೆಯ ಕಂಡು ಹಿಡಿದು ಔಷಧಿ ಕೊಡದ
ವೈದ್ಯ ಕೊಟ್ಟದ್ದನ್ನೆ ಕುಡಿದು ಕುಡಿದು
ಏದು ಉಬ್ಬಸಕೆ ಒಳಗಾಗಿ ಬಿದ್ದಿದೆ ಜನತೆ
ಬಂದ ಕೆಮ್ಮಿಗೆ ದಮ್ಮಿಗಳ್ಳೆ ಹೊಯ್ದು ('ವಿಷಾದ')

ಹರಿದ ಕಡೆಗೇ ನೀರು ಮತ್ತೆ ಹರಿಯುವುದು
ಬರಡು ನೆಲ ಬಡವಾಗಿ ಉಳಿದುಕೊಳ್ಳುವುದು ('ದುಃಖಗೀತ')

ವಿಸ್ಮಯದ ಕೆತ್ತನೆಯ ನವಿರುಗಲ್ಲಿನ ಕಲೆಗೆ
ಮಲ್ಲಿಕಾಫರನ ಕೊಲೆಗಡುಕ ದಾಳಿ
ಕೆಂಬೂತ ಕುಣಿತ ಒಳಗಿರಲು ನವಿಲಿನ ನೃತ್ಯ ಹೊರಗೆ

('ಸ್ವಾರ್ಥಪ್ರತಿಷ್ಠೆಗೆ ಪ್ರಶ್ನೆ')

ಕಾವ್ಯವಸ್ತುವಿನಲ್ಲಿ ತನ್ನನ್ನು ಸಂಪೂರ್ಣತೊಡಗಿಸಿಕೊಳ್ಳದೆ ಅದರ ಬಗೆಗಿನ ವ್ಯಾಖ್ಯಾನ ಇಲ್ಲಿಯ ಬಹುತೇಕ ಪದ್ಯಗಳಲ್ಲಿ ಕಂಡುಬರುತ್ತಿದ್ದರೂ 'ಹಳ ಹಳಕು ಹೀರಕದ ಕಾಂತಿ'ಯಾಗಿ ಕೆಲವು ಜೀವಂತ ಪ್ರತಿಮೆಗಳು ಅಲ್ಲಲ್ಲಿ ಮನಸೆಳೆಯುತ್ತವೆ. ('ಕತ್ತೆ ಹೊತ್ತಿರುವ ಕಸ್ತೂರಿ ಹೇರು', 'ಬ್ರೇಕು ಬೀಳದ ಲಡಾಸು ಲಾರಿ' 'ದಿವಾಳಿ ಎದ್ದಿದ್ದರೂ ದೀಪಾವಳಿಯ ಮೋಜು' ಇತ್ಯಾದಿ) ಏನಿದ್ದರೂ ಒಂದು ನಿರ್ದಿಷ್ಟ ಆಕಾರವನ್ನು ಪಡೆಯುವಲ್ಲಿ ಹೆಚ್ಚಿನ ಕವಿತೆಗಳು ಹಿಂದೆ ಬಿದ್ದಿರುವುದನ್ನು ಕಾಣಬಹುದು. ಆದರೆ ಒಂದು ಸಿದ್ಧವಾದ ಭಾಷಾ ಶೈಲಿಯಿಂದ ಬಿಡಿಸಿಕೊಂಡು ಹೊರಬರುವ ಹಾಗೂ ವೈಯಕ್ತಿಕ ಸ್ವರವನ್ನು ಕಂಡುಕೊಳ್ಳುವ ಸೂಚನೆ ಈ ದ್ವಿತೀಯ ಘಟ್ಟದಲ್ಲಿ ಕಂಡುಬರುತ್ತದೆ.

ಈ ಪ್ರಯೋಗಾವಸ್ಥೆ ಅನಿವಾರ್ಯವಾಗಿದ್ದರೂ ಅದು ಕವಿಗೆ ತೃಪ್ತಿಯನ್ನು ತಂದಿರಲಿಲ್ಲವೆನ್ನುವುದು 'ಸಂಕರತಳಿ'ಯವರೆಗೆ (ಸುಮಾರು ೧೬ ವರ್ಷ) ಅವರು

ತಾಳ್ಮೆವಹಿಸಿರುವುದರಿಂದ ಸ್ಪಷ್ಟವಾಗುತ್ತದೆ. ಸಂಕರತಳಿ ಸಂಕಲನದಲ್ಲಿರುವ ಹೆಚ್ಚಿನ ಕವಿತೆಗಳು ಅಂಥ ತಾಳ್ಮೆಯ ಪ್ರತೀಕವಾಗಿ ಬಹುಮಟ್ಟಿಗೆ ಸಾರ್ಥಕವೆನ್ನಿಸುವಂಥ ರಚನೆಗಳಾಗಿವೆ. ವೈಯಕ್ತಿಕವಾದ ಸಂಕೀರ್ಣಾನುಭವ ಸಾರ್ವತ್ರಿಕವೆನಿಸಿ ಸಫಲಗೊಳ್ಳುವಲ್ಲಿ ದೇಸಿಮಾರ್ಗಗಳ ಸಂಕರದ ಮೂಲಕ ಭಾವದ ವ್ಯಂಜಕತೆ ಭಾಷೆಯಲ್ಲಿ ಪರಿಣಾಮಕಾರಿಯಾಗಿ ಅಭಿವ್ಯಕ್ತಗೊಳ್ಳುವಲ್ಲಿ ಗಣನೀಯವಾದ ಬೆಳವಣಿಗೆಯನ್ನು ಇಲ್ಲಿ ಕಾಣುತ್ತೇವೆ. ಅಲ್ಲಲ್ಲಿಯ ಶ್ಲೇಷೆ ಕಾವ್ಯದ ಪ್ರೌಢಾವಸ್ಥೆಯನ್ನೂ ಸಹಜವಾಗಿಯೆ ಸೂಚಿಸುತ್ತಿದೆ.

ಅಮೃತ ವೃಷ್ಟಿ ಸುವರ್ಣ ಪುಷ್ಪವೃಷ್ಟಿ
ಎಲ್ಲ ಕುಂಡಿಗೆ ಹಚ್ಚಿಕೊಂಡ ಪುನುಗು (‘ಅಂತರಾತ್ಮನಿಗೆ’)

ಹಾಗೆಯೇ ಜೀವನದ ತಾತ್ವಿಕ ದೃಷ್ಟಿಯನ್ನೂ ಅದು ಈಗ ಪಡೆದುಕೊಳ್ಳುತ್ತಿದೆ:

ನಿರಾಕರಣೆ ಎನ್ನುವೀ ನಂಜು ತುಂಬಿದ ಬಯಕೆ
ಗುಟುಕರಿಸಿ ಸಾಯುವುದು ಶುದ್ಧ ಹಾಸ್ಯ
ತೊಡಗಿಕೊಳ್ಳದ ಹೊರತು ಅಡಗಿ ಕುಳಿತದ್ದೆಲ್ಲ
ಅರ್ಥವಾಗದು ದೂರದಿಂದ ಕವಿತೆ (‘ಪರಿವೆ’)

‘ಕೆಲವು ಸಾನೆಟ್ಟುಗಳು’ ತಕ್ಕ ಬಂಧವಿಲ್ಲದೆಯೂ ಅಲ್ಪ ಸ್ವಲ್ಪ ವೈಚಾರಿಕ ಘರ್ಷಣೆಯಿಂದ ಓದಿಸಿಕೊಳ್ಳುತ್ತವೆ. ಒಟ್ಟಿನಲ್ಲಿ ‘ಸಂಕರತಳಿ’ ವೀಚಿಯವರ ಕಾವ್ಯ ಜೀವನದಲ್ಲಿ

ದಳದಳಿಸಿ ವ್ಯಕ್ತಿತ್ವ
ಹೊಸ ಹಿಗ್ಗಿನಧ್ಯಾಯ (‘ಹಿಗ್ಗಿನ ಅಧ್ಯಾಯ’)

‘ನವಿಲ ಮನೆ’ಯಲ್ಲಿ ಹಿಂದಿನ ಕಾವ್ಯ ವಸ್ತುಗಳೇ ಹೊಸ ಸಂದೇಶದೊಂದಿಗೆ, ಕೃತಜ್ಞತಾ ಭಾವವನ್ನು ಹೊತ್ತು ಬಂದಿರುವಂತೆ ತೊರುತ್ತದೆ. ಸಾಮಾಜಿಕ, ರಾಜಕೀಯ ರಂಗದಿಂದ ದೂರವಿದ್ದು ‘ಬಯಲ ಚೇತನವಾಗಿ’ ‘ಮಾನವ ಶಿಶುವಿಗೆ ನೆಲದ ಮನವಿ’ಯನ್ನು ಅರ್ಪಿಸುವುದು ಇಲ್ಲಿ ಮುಖ್ಯವಾಗಿದೆ. ‘ಜೀವನವೇ ತಾರಕ’ವೆನಿಸಿದೆ. ‘ಫಲಿಸಲಿ ಇಲ್ಲಿಯೆ ಮನುಕುಲವು’ ‘ಚೈತ್ರಪಥ’ ‘ಅನುಗ್ರಹ’ ‘ಕುಂದುಕೊರತೆಯ ನೀಗುವೆ’ ಎಂಬಂಥ ಸೊಗಸಾದ ಸರಳ ಭಾವಗೀತೆಗಳೂ ಇಲ್ಲಿವೆ. ಮುಕ್ತಛಂದ ಮರಳಿ ಛಂದೋಬದ್ಧವಾಗುವಲ್ಲಿ ಒಳಗಿನ ಅಂತಃಕರಣ ಹಾಗೂ ಹೊರಗಿನ ನಿಸರ್ಗ ಪರಸ್ಪರ ಬೆಸೆದುಕೊಳ್ಳುತ್ತವೆ.

ಪಾರಿವಾಳದ ಪಾದದಂಥ ಕೆಂಪನೆ ಹಗಲು
ಚಿಟ್ಟೆ ತುಟಿಗಿಟ್ಟ ಹೂಬಟ್ಟಲಲ್ಲಿ
ಇಳೆ ಕೆಳೆಯ ಪರ್ವತದ ಮೇಲೆ ಬೆಳಕಿನ ತಂದೆ
ತಾಯಿಯರು ನಕ್ಕು ಅಡಗಿದ್ದ ಕಂಡೆ (‘ಕಪ್ಪು ಕೊಡೆನೆರಳಲ್ಲಿ’)

ಪ್ರಣಯಾದ್ರಿಯಲ್ಲಿ ಕರುಣಾಮೂರ್ತಿ ಮೈ ನುಡಿಸೊ
ಎಂದು ಪಿಳ್ಳಂಗೋವಿ ಕಿತ್ತೆಸೆದಳು (‘ರಾಧೆಯ ಪ್ರಣಯ’)

ಬದುಕಿನ ನಿಜವಾದ ಮಾನವೀಯ ಸಂಪತ್ತನ್ನು ಪಡೆದು ‘ನಶ್ವರದಲ್ಲಿ ಉಳಿಯುವುದನ್ನು ಹುಡುಕಿರಿ’ ಎಂದು ತನ್ನ ಶಬ್ದಗಳಿಗೆ ಕೇಳಿಕೊಳ್ಳುವ ಕವಿ ಜೀವನಾನುಭವದಿಂದ ಹೆಚ್ಚಿನ ಆತ್ಮವಿಶ್ವಾಸ ಪಡೆದಿದ್ದಾನೆ:

ಅರಿವೆಂದರೇನನ್ನೊ ಹುಡುಕ ಹೋಗುವುದಲ್ಲ
ತಾನೇ ಅದಾಗುವುದು ಮೆಟ್ಟಿ ಮೆಟ್ಟಿ ಅಹಂಕಾರ ತುಳಿದು
(‘ಕ್ರಿಯೆಯ ಕಿನ್ನರಲೋಕ’)

ಕಾವ್ಯ ಪ್ರಕ್ರಿಯೆಯಲ್ಲಿ, ತಮ್ಮ ಅತ್ಯಂತ ಮೆಚ್ಚಿನ ಕವಿಗಳಾದ ಬೇಂದ್ರೆ ಹಾಗೂ ಅಡಿಗರನ್ನೊಳಗೊಂಡು ಯಾವುದೇ ಪ್ರಮುಖ ಕವಿಯ ನೇರ ಪ್ರಭಾವಕ್ಕೆ ವೀಚಿಯವರ ಕಾವ್ಯ ಒಳಗಾಗದಿರುವದು ಆಶ್ಚರ್ಯದ ಸಂಗತಿಯಾಗಿದೆ. ‘ಹಾಡು-ನಾಡು’ ಪದ್ಯವೊಂದು ಮಾತ್ರ ‘ಪಾತರಗಿತ್ತಿ ಪಕ್ಕ’ ಕವಿತೆಯನ್ನು ನೆನಪಿಗೆ ತರುತ್ತದೆ.

ವಿಕೃತಿಯ ಸಹಜವನ್ನಾಗಿಸದಿರೋ
ಮರಗಿಡ ಹಕ್ಕಿ ಬೆಳೆಸಿದವಳು
ಜೀವರಾಶಿಗೊಲಿದವಳು (‘ಮಾನವ ಶಿಶುವಿಗೆ ನೆಲದ ಮನವಿ’)

ಇಂಥ ಸಾಲುಗಳಲ್ಲಿ ಅಡಿಗರ ದನಿ ಅಲ್ಲಲ್ಲಿ ಸೂಕ್ಷ್ಮವಾಗಿ ಕೇಳಿಸುತ್ತದೆ.

ಇವರ ಕಾವ್ಯಭಾಷೆ ಮಾರ್ಗದೇಸಿಯ ಸಮನ್ವಯದಲ್ಲಿ ಭಾವ ಪುಷ್ಟಿಯನ್ನೂ ಮಾರ್ದವತೆಯನ್ನೂ ಪಡೆದುಕೊಂಡಿದೆ. ಆಡು ಮಾತನ್ನು ಆದಷ್ಟು ಸಂಸ್ಕಾರಗೊಳಿಸಿ ಬಳಸುವುದರಿಂದ ಇಲ್ಲಿಯ ಲಯ ಆಡುಮಾತಿನ ಲಯಕ್ಕಿಂತ ಛಂದೋಲಯಕ್ಕೆ ಹೆಚ್ಚು ಸಮೀಪವಾಗಿದೆ. ಛಂದಸ್ಸಿನಲ್ಲಿ ಎಲ್ಲಿ ಏಕತಾನತೆ ಉಂಟಾಗುತ್ತದೆಯೋ ಎಂಬ ಅಳುಕಿನಿಂದ ನಡಿಗೆಯನ್ನು ಬದಲಾಯಿಸ ಹೋಗಿ ಕೆಲವೆಡೆ ಎಡವಿದ್ದೂ ಉಂಟು. ಪ್ರಾಸದ ಬಗ್ಗೆ ವಿಶೇಷ ಕಾಳಜಿವಹಿಸುವುದರಿಂದ ಶೈಲಿ ಕೆಲವೆಡೆ ಕೃತಕವಾಗಿ ತೋರಬಹುದು. ಉದಾಹರಣೆಗೆ ಪ್ರಣಯ ಪ್ರವೀಣೆ, ಪ್ರೇಮ ನಿಪುಣ ಜಿಪುಣೆ, ಅಕಟಕಟಾ ನಿಕಟ, ಅಂತರಂಗ ವಿನೀತ ಪುನೀತ, ಸ್ಮಿತ ಹಿತ ವಸಂತ, ಮಿಡಿಯಾದ ಮಿಡತೆ ಮಿಡಿತಗಳಿಂದ, ಅಪ್ಪಳಿಕೆ ತಿಪ್ಪಳಿಕೆ ಕುಪ್ಪಳಿಕೆ ಕಪ್ಪು, ಗೆಣೆಗೇರಿಯಲ್ಲಿ ಹೊಣೆಗಾರ ಗಿಣಿ- ಇತ್ಯಾದಿ.

ಭಾವ ಸಮೃದ್ಧಿ, ವೈಚಾರಿಕತೆಯ ಮಿಂಚು, ಸಮಕಾಲೀನ ಸ್ಪಂದನಗಳಿಂದ ಹಾಗೂ ವ್ಯಕ್ತಿ ವೈಶಿಷ್ಟ್ಯದಿಂದ ವೀಚಿಯವರ ಕಾವ್ಯ ಓದುಗರಿಗೆ ಮನಃಸಂಸ್ಕಾರವನ್ನು ಒದಗಿಸುವಲ್ಲಿ ಹಿಂದೆ ಬೀಳಲಾರದು ಎಚ್.ಎಸ್. ಶಿವಪ್ರಕಾಶ ನುಡಿದಿರುವಂತೆ (‘ಸಂಕರತಳಿ’ಯ ಬ್ಲರ್ಬಿನಲ್ಲಿ) ವೀಚಿಯವರದು ‘ಚಿರ ಹರೆಯದ ಕಾವ್ಯಲೋಕ’:

